

ಸ್ಕೌಟ್ ಶತಮಾನೋತ್ಸವ – 2007

Price Rs. 3/- per copy only




# ಕರ್ನಾಟಕ ಸ್ಕೌಟ್ ಮತ್ತು ಗೈಡ್

ವಾರ್ತಾ ಪತ್ರಿಕೆ

# Karnataka Scout & Guide

News Magazine

Vol - 7 JANUARY - 2008 NO - 01






His Excellency Sri Rameshwar Thakur, Governor of Karnataka & President, Bharat Scouts & Guides, India "Flagged Off" the Peace March of Scouts & Guides organised as part of "National Youth Day" & Swamy Vivekananda Birthday Celebrations held on 12 January 20 08 in front of Vidhana Soudha, Bangalore.




His Excellency Sri Rameshwar Thakur and Sri P.K.H. Tharakan, Advisor to Governor leading the "Peace Route March" in front of Vidhana Soudha, State Chief Commissioner, State Treasurer, Joint State Secretary(S)&(G) & others are seen.



A View of Scouts & Guides who participated in the "Peace Route March".



ಬೆಸೆಂಟ್ ಪಾರ್ಕ್ ತರಬೇತಿ ಕೇಂದ್ರಕ್ಕೆ ಘನತೆವೆತ್ತ ರಾಜ್ಯಪಾಲರು 11 ನವೆಂಬರ್ 2007ರಂದು "ಪ್ರತಿಭಾ ಕಾರಂಜಿ" ಉದ್ಘಾಟನೆಯಲ್ಲಿ ಭಾಗವಹಿಸಲು ಆಗಮಿಸಿದಾಗ ರಾಜ್ಯ ಮುಖ್ಯ ಆಯುಕ್ತರು ಹಾಗೂ ಶ್ರೀಮತಿ ಸರೋಜ. ವಿ.ನಾಯ್ಡು, ಸ್ಥಾನಿಕ ಆಯುಕ್ತರು ಸ್ವಾಗತಿಸಿದರು.



ಬೆಸೆಂಟ್ ಪಾರ್ಕ್ ತರಬೇತಿ ಕೇಂದ್ರಕ್ಕೆ ಘನತೆವೆತ್ತ ರಾಜ್ಯಪಾ
ಶ್ರೀ ರಾಮೇಶ್ವರ ಠಾಕೂರ್ ಹಾಗೂ ಶ್ರೀಮತಿ ನರ್ಮದಾ ಠಾಕೂರ್ ಆಗಮಿಸಿದಾ
ಸಹಾಯಕ ರಾಜ್ಯ ಆಯುಕ್ತೆ ಡಾ|| ರತ್ನ ಅರಸ
ಪುಷ್ಪಗುಚ್ಛ ನೀಡಿ ಸ್ವಾಗತಿಸಿದರು.



His Excellency Sri Rameshwar Thakur Presented Rajyostava Award to Sri T.V. Narayana Shastri, Dist. Chief Commissioner, BS&G, Shimoga on 1November07 at Ravindra kalakshetra. Sri Krishna, Speaker, Karnataka Legislative Assembly, Sri I.M. Vittala Murthy, Secretary, Dept. of Kannada & Culture are seen.



His Excellency Sri Rameshwar Thakur Presente
Rajyostava Award to Mrs. M.G. Bopaiah, Vice Presiden
Bharat Scouts & Guides on 1 November 07 at Ravind
kalakshetra. Sri Krishna, Speaker, Karnataka Legislativ
Assembly, Sri I.M. Vittala Murthy, Secretary, Dept.
Kannada & Culture are seen.



Sri P.K.H.Tharakan, Advisor to Governor of Karnataka participated in the "Flag off" Ceremany of "Scouts & Guides Peace March" held on 12 January 2008 in Front of Vidhana Soudha. State Chief Commissioner & State Treasurer and others are seen.



"ರಾಷ್ಟ್ರೀಯ ಯುವ ದಿನಾಚರಣೆ" ಸಂದರ್ಭದಲ್ಲಿ ಏರ್ಪಡಿಸಿದ
ಭಾಷಣಕಲೆ, ಚಿತ್ರಕಲೆ, ಪ್ರಬಂಧ ಸ್ಪರ್ಧೆಗಳ ಮುಕ್ತಾಯ
ಸಮಾರಂಭದಲ್ಲಿ ಭಾಗವಹಿಸಿದ ಯುವಜನ ಸೇವಾ ಹಾಗೂ
ಕ್ರೀಡಾ ಇಲಾಖೆ ಆಯುಕ್ತ ಶ್ರೀ ಅಮರ್‌ಕುಮಾರ್ ಪಾಂಡೆ
ಅವರೊಂದಿಗೆ ರಾಜ್ಯ ಮುಖ್ಯ ಆಯುಕ್ತರು.




Vol - 7 January - 2008 No. 10



## ಪರಿವಿಡಿ

# ರಾಜ್ಯ ಮುಖ್ಯ ಆಯುಕ್ತರ ನುಡಿ...............................................

*ಮಾನ್ಯರೆ,*

ವಿಶ್ವ ಸ್ಕೌಟ್ ಶತಮಾನೋತ್ಸವ ಆಚರಣೆ ಪ್ರಯುಕ್ತ ದಿನಾಂಕ : 12ರಿಂದ 14ರ ವರೆಗೆ ಶಿವಮೊಗ್ಗ ಜಿಲ್ಲಾ ಸಂಸ್ಥೆಯು ಏರ್ಪಡಿಸಿದ್ದ ಕಬ್-ಬುಲ್‌ಬುಲ್ ಮತ್ತು ಸ್ಕೌಟ್-ಗೈಡ್ ಕ್ಯಾಂಪೂರಿಯು ಅತ್ಯಂತ ಯಶಸ್ವಿಯಾಗಿ ಜರುಗಿರುವ ಬಗ್ಗೆ ದೂರದರ್ಶನ ಹಾಗೂ ಮಾಧ್ಯಮಗಳಲ್ಲಿ ಸಾಕಷ್ಟು ಪ್ರಸಾರ ಬಂದಿರುತ್ತದೆ.

ದಿನಾಂಕ : 13.01.2008ರಂದು ಜರುಗಿದ ಎಲ್ಲಾ ಕಾರ್ಯಕ್ರಮಗಳಲ್ಲಿ ನಾನು ಭಾಗವಹಿಸಿ ಕ್ಯಾಂಪೂರಿಯ ಯಶಸ್ಸಿಗೆ ಸಹಕರಿಸಿದ ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಗಳ ಎಲ್ಲಾ ಪದಾಧಿಕಾರಿಗಳಿಗೆ, ಜಿಲ್ಲಾಡಳಿತ, ಜಿಲ್ಲಾ ಪಂಚಾಯತ್, ಸಾರ್ವಜನಿಕ ಶಿಕ್ಷಣ ಇಲಾಖೆ ಮತ್ತು ಶಿವಮೊಗ್ಗ ಜಿಲ್ಲೆಯ ಸ್ಕೌಟ್-ಗೈಡ್ ಅಭಿಮಾನಿಗಳಿಗೆ ನನ್ನ ಕೃತಜ್ಞತೆ ಹೇಳಿದ್ದೇನೆ. ಈ ಸಂದರ್ಭದಲ್ಲಿ ಅತ್ಯಂತ ಕೌಶಲ್ಯಮಯವಾಗಿ "ಸ್ಕೌಟ್-ಗೈಡ್ ಬ್ಯಾಂಡನ್ನು" ಪ್ರದರ್ಶಿಸಿದ ಹೆಗ್ಗೋಡಿನ "ಹೊಂಗಿರಣ ಪಬ್ಲಿಕ್ ಶಾಲೆಯ" ಸ್ಕೌಟ್-ಗೈಡ್‌ಗಳನ್ನು ಹಾಗೂ ಬ್ಯಾಂಡ್ ಪ್ರದರ್ಶನದ ನಾಯಕತ್ವವನ್ನು ವಹಿಸಿ ಅತ್ಯಂತ ಯಶಸ್ವಿಯಾಗಿ ಬ್ಯಾಂಡ್ ಪ್ರದರ್ಶನವನ್ನು ನೀಡಿದ ಶಾಲೆಯ ಗೈಡ್ ಕುಮಾರಿ ಶ್ರೇಯಸ್ ಎಸ್. ಭಾಗವತ್ ಹಾಗೂ ತಂಡದ ನಾಯಕ ಶ್ರೀ ಕೆ. ರವಿ ಅವರನ್ನು ಹೃತ್ಪೂರ್ವಕವಾಗಿ ಅಭಿನಂದಿಸಿದ್ದೇನೆ. ಮುಕ್ತಾಯ ಸಮಾರಂಭದಲ್ಲಿ ಭಾಗವಹಿಸಿದ ಜಿಲ್ಲಾಧಿಕಾರಿಗಳು, ಜಿಲ್ಲಾ ಪಂಚಾಯಿತಿ ಮುಖ್ಯ ಕಾರ್ಯನಿರ್ವಹಣಾಧಿಕಾರಿ ಹಾಗೂ ಇತರ ಅತಿಥಿಗಳು, ಸಾರ್ವಜನಿಕರು ಬ್ಯಾಂಡ್ ಪ್ರದರ್ಶನವನ್ನು ವೀಕ್ಷಿಸಿ ಪ್ರಚಂಡ ಕರತಾಡನದೊಂದಿಗೆ ಅಭಿನಂದಿಸಿದರು.

ಮೇಲ್ಕಂಡ ಕ್ಯಾಂಪೂರಿಯಲ್ಲಿ ಭಾಗವಹಿಸಿದ ಜಿಲ್ಲೆಯ 1700 ಕಬ್-ಬುಲ್‌ಬುಲ್‌ಗಳು, ಸ್ಕೌಟ್-ಗೈಡ್‌ಗಳಲ್ಲಿ, 200ಕ್ಕೂ ಹೆಚ್ಚು ಮಕ್ಕಳಿಗೆ ಚಳವಳಿಯ ಸಮವಸ್ತ್ರವಿರಲಿಲ್ಲ. ಇದನ್ನು ಮನಗಂಡ ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಟಿ.ವಿ. ನಾರಾಯಣಶಾಸ್ತ್ರಿಗಳು ದಾವಣಗೆರೆಯಿಂದ ಸ್ಕೌಟ್-ಗೈಡ್ ಸಮವಸ್ತ್ರ ತಂದಿದ್ದ ವ್ಯಕ್ತಿಯಿಂದ ಕಬ್-ಬುಲ್‌ಬುಲ್, ಸ್ಕೌಟ್-ಗೈಡ್ ಸಮವಸ್ತ್ರಗಳನ್ನು ಖರೀದಿಸಿ ಜಿಲ್ಲಾ ಸಂಸ್ಥೆಯಲ್ಲಿದ್ದ ಸಮವಸ್ತ್ರದೊಂದಿಗೆ ಜಿಲ್ಲೆಯ ವಿವಿಧ ಶಾಲೆಯ ಕಬ್-ಬುಲ್‌ಬುಲ್, ಸ್ಕೌಟ್-ಗೈಡ್‌ಗಳಿಗೆ, ಸಮವಸ್ತ್ರಗಳನ್ನು ನೀಡಿ ಅವರುಗಳೂ "ಇತರೆ ಸಮವಸ್ತ್ರಧಾರಿಗಳೊಂದಿಗೆ"- ವಿಶ್ವ ಸ್ಕೌಟ್ ಶತಮಾನೋತ್ಸವ ಕ್ಯಾಂಪೂರಿಯಲ್ಲಿ ಹೆಮ್ಮೆಯಿಂದ ಭಾಗವಹಿಸಲು ಅವಕಾಶ ಒದಗಿಸಿಕೊಟ್ಟಿದ್ದನ್ನು ನೋಡಿ ಸಂತೋಷಪಟ್ಟಿದ್ದಲ್ಲದೆ- ಶಾಲಾ ಸಮವಸ್ತ್ರದಲ್ಲಿ ಬಂದು ಕಬ್-ಬುಲ್‌ಬುಲ್, ಸ್ಕೌಟ್-ಗೈಡ್ ಸಮವಸ್ತ್ರದಲ್ಲಿ ಕ್ಯಾಂಪೂರಿಯಲ್ಲಿ ಭಾಗವಹಿಸಿ ತಮ್ಮ ಊರಿಗೆ-ಶಾಲೆಗೆ ವಿಶ್ವ ಸ್ಕೌಟ್-ಗೈಡ್ ಸಮವಸ್ತ್ರದಲ್ಲಿ ಹಿಂತಿರುಗಿದ್ದು ಅತ್ಯಂತ ಹೆಮ್ಮೆ ಹಾಗು ಅಭಿಮಾನದ ವಿಷಯ. ಹಿರಿಯರೂ ಸ್ಕೌಟ್ ಚಳವಳಿಯಲ್ಲಿ ಕಬ್ ಸ್ಕೌಟ್-ರೋವರ್ ಆಗಿ ಜಿಲ್ಲೆಯನ್ನು ಮುನ್ನಡೆಸುತ್ತಿರುವ ಶ್ರೀ ನಾರಾಯಣಶಾಸ್ತ್ರಿ ಅವರಿಗೆ ನನ್ನ ಹೃತ್ಪೂರ್ವಕ ಅಭಿನಂದನೆಗಳನ್ನು ಸಲ್ಲಿಸುತ್ತೇನೆ.

ದಿನಾಂಕ : 19ರಿಂದ 21ರವರೆಗೆ ಬಳ್ಳಾರಿ ಜಿಲ್ಲಾ ಸಂಸ್ಥೆಯು ವಿಶ್ವ ಸ್ಕೌಟ್ ಶತಮಾನೋತ್ಸವ ಅಂಗವಾಗಿ ಜಿಲ್ಲಾ ಸ್ಕೌಟ್-ಗೈಡ್ ಮೇಳವನ್ನು ಆಚರಿಸಿದೆ. ಈ ರ್‍ಯಾಲಿಯಲ್ಲಿ ಜಿಲ್ಲಾ ಕಾನೂನು ಸೇವೆಗಳ ಪ್ರಾಧಿಕಾರ ಹಾಗು ಬಳ್ಳಾರಿ ಜಿಲ್ಲಾ ನ್ಯಾಯವಾದಿಗಳ ಸಂಘದ ಸಹಯೋಗದೊಂದಿಗೆ ಸ್ಕೌಟ್-ಗೈಡ್‌ಗಳಿಗೆ "ಕಾನೂನು ಸಾಕ್ಷರತೆ" ಕಾರ್ಯಕ್ರಮವನ್ನು ಏರ್ಪಡಿಸಿ ಕಾನೂನಿನ ಅರಿವುಂಟು ಮಾಡುವಲ್ಲಿ ಮೊದಲ ಪ್ರಯತ್ನ ಮಾಡಿರುವ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಿಗೆ ನನ್ನ ಅಭಿನಂದನೆಗಳು.

ಈ ತಿಂಗಳ 28ರಿಂದ 31ರವರೆಗೆ ಮಂಗಳೂರಿನ ಬಳಿಯ ಕೊಟ್ಟಾರಿ ಕುದ್ರು, ಅಡ್ಯಾರ್ ದ್ವೀಪದಲ್ಲಿ ಏರ್ಪಡಿಸಿರುವ ರಾಜ್ಯ ಮಟ್ಟದ ಬ್ರೌನ್‌ಸೀ ದ್ವೀಪ ಪುನರ್ ನಿರ್ಮಾಣ "ದ್ವೀಪವಾಸ ಶಿಬಿರದಲ್ಲಿ" ರಾಜ್ಯದ ಎಲ್ಲಾ ಜಿಲ್ಲೆಗಳಿಂದ 800 ಸ್ಕೌಟ್-ಗೈಡ್‌ಗಳು ಹಾಗೂ ಸ್ಕೌಟರ್-ಗೈಡರ್‌ಗಳು ಭಾಗವಹಿಸಲಿದ್ದಾರೆ. ದಕ್ಷಿಣ ಕನ್ನಡ ಜಿಲ್ಲಾ ಸಂಸ್ಥೆ- ಜಿಲ್ಲಾಡಳಿತ ಹಾಗೂ ಜಿಲ್ಲೆಯ ವಿವಿಧ ಸಂಘ-ಸಂಸ್ಥೆಗಳು, ಚಳವಳಿಯ ಅಭಿಮಾನಿಗಳ ನೆರವು- ಸಹಾಯ ಪಡೆದು ದ್ವೀಪವಾಸ ಶಿಬಿರದಲ್ಲಿ ಭಾಗವಹಿಸುವ ಸ್ಕೌಟ್-ಗೈಡ್ ಹಾಗೂ ವಯಸ್ಕ ನಾಯಕರುಗಳಿಗೆ ಲಂಡನ್ ನಗರದ ಬ್ರೌನ್‌ಸೀ ಶಿಬಿರದ ಸ್ವಾನುಭವವನ್ನು ನೀಡಲು ಸನ್ನದ್ಧವಾಗಿದೆ.

ದ್ವೀಪವಾಸ ಶಿಬಿರವನ್ನು ಯಶಸ್ವಿಗೊಳಿಸಲು ಸಾಕಷ್ಟು ಶ್ರಮ ವಹಿಸಿರುವ ದಕ್ಷಿಣ ಕನ್ನಡ ಜಿಲ್ಲಾಧಿಕಾರಿಗಳಾದ ಶ್ರೀ ಎಂ. ಮಹೇಶ್ವರರಾವ್, ಜಿಲ್ಲಾ ಮುಖ್ಯ ಆಯುಕ್ತ ಶ್ರೀ ಐ.ಎ. ಕೈರನ್ನ, ಉಪಸಮಿತಿಯ ಅಧ್ಯಕ್ಷಿಣಿಯಾದ ಕುಮಾರಿ ರವಿವೆಸ್ಲಿ ಹಾಗೂ ಶಿಬಿರದ ನಾಯಕರಾದ ಶ್ರೀ ಎಂ.ಜಿ. ಕಜೆ, ಶ್ರೀ ಪ್ರತಿಮ್ ಕುಮಾರ್ ಹಾಗೂ ಜಿಲ್ಲಾ ಸಂಸ್ಥೆ-ಸ್ಥಳೀಯ ಸಂಸ್ಥೆಗಳ ಎಲ್ಲಾ ಪದಾಧಿಕಾರಿಗಳು ಹಾಗೂ ದ್ವೀಪಶಿಬಿರವಾಸದಿಂದ ಸ್ಕೌಟ್-ಗೈಡ್ ಚಳವಳಿಯ ಚಿಂತನೆ, ಆದರ್ಶಗಳಿಗೆ ಹೆಚ್ಚು ಬೆಳಕು ಚೆಲ್ಲುವಲ್ಲಿ ಸಹಕರಿಸಿರುವ ಪ್ರತಿಯೊಬ್ಬರಿಗೂ ನನ್ನ ವೈಯಕ್ತಿಕ ಅಭಿನಂದನೆಗಳು.

ಈಗಾಗಲೇ ರಾಜ್ಯದ ವಿವಿಧ ಸ್ಥಳೀಯ ಹಾಗೂ ಜಿಲ್ಲಾ ಸಂಸ್ಥೆಗಳು ವಿಶ್ವ ಸ್ಕೌಟ್ ಶತಮಾನೋತ್ಸವ ರ್‍ಯಾಲಿಯನ್ನು ಆಚರಿಸುತ್ತಿರುವ ಬಗ್ಗೆ ವರದಿಗಳು ರಾಜ್ಯ ಸಂಸ್ಥೆಗೆ ಬಂದಿವೆ. ಹಲವು ಜಿಲ್ಲೆಗಳಲ್ಲಿ ಕಾರ್ಯಕ್ರಮ ಮಾಡುವ ಬಗ್ಗೆ ಈಗಾಗಲೇ ಯೋಜಿಸಲಾಗಿದೆ. 2008ರಲ್ಲಿ ಚಳವಳಿಯ ಹೆಜ್ಜೆ ಗುರುತುಗಳನ್ನು ರಾಜ್ಯದ ಹೆಚ್ಚು ಶಾಲೆ-ಕಾಲೇಜುಗಳಿಗೆ ತಲುಪಿಸುವಲ್ಲಿ ತಾವುಗಳು ಸಕ್ರಿಯವಾಗಿ ಭಾಗವಹಿಸಬೇಕೆಂದು ಕೋರುತ್ತೇನೆ.

ತಮ್ಮ ವಿಶ್ವಾಸಿ

ಕೊಂಡಜ್ಜಿ ಬ. ಷಣ್ಮುಖಪ್ಪ

# ದರ್ಶನ - 2013

- ಎನ್. ಶ್ರೀನಿವಾಸನ್, ಎಲ್.ಟಿ.(ಸ್ಕೌಟ್)

1907ರಲ್ಲಿ ಬೇಡನ್ ಪೊವೆಲ್ ಮಹಾಶಯನಿಂದ ಪ್ರಾರಂಭಿಸಲ್ಪಟ್ಟ ಸ್ಕೌಟ್ ಯುವ ಚಳವಳಿ ಇಂದು ಬೃಹದಾಕಾರವಾಗಿ ಬೆಳೆದು ವಿಶ್ವದ 216 ರಾಷ್ಟ್ರಗಳಲ್ಲಿ ವ್ಯಾಪಿಸಿದೆ. ಕೋಟ್ಯಂತರ ಮಂದಿ ಯುವ ಜನತೆ ಇದರ ಫಲವನ್ನು ಸವಿಯುತ್ತಿದ್ದಾರೆ.

ಬೇಡನ್ ಪೊವೆಲ್ಲರು ಅಂದು ಯುವ ಜನತೆಯ ಬಗ್ಗೆ ಕಂಡ ಕನಸು, ಅವರ ಭವಿಷ್ಯತ್ತಿನ ಬಗೆಗಿನ ಚಿಂತನೆ, ಅವರಲ್ಲಿದ್ದ ಪ್ರತಿಭೆಗಳನ್ನು ಹೊರತರಲು ಅವಿಷ್ಕರಿಸಿದ ಮಾರ್ಗೋಪಾಯಗಳು ಇಂದು ಅನೇಕ ಕವಲುಗಳಾಗಿ ಒಡೆದು ನೂತನ ಚಿಂತನೆಗಳಿಗೆ ದಾರಿ ಮಾಡಿಕೊಟ್ಟಿವೆ.

ಸಾಮಾಜಿಕ ಬದಲಾವಣೆಗಳು, ವೈಜ್ಞಾನಿಕ ಪ್ರಗತಿ, ಶಿಕ್ಷಣ, ರಾಜಕೀಯ ಇವೇ ಮುಂತಾದವುಗಳ ಪ್ರಭಾವ ಹಿರಿದಾಗಿದೆ.

ಆರೋಗ್ಯ, ಕರಕುಶಲತೆ, ನಡವಳಿಕೆ, ಸೇವೆ ಮತ್ತು ದೇವರಿಗೆ ಕರ್ತವ್ಯ ಎಂಬ 'ಬೇಡನ್ ಪೊವೆಲ್ಲರ ಐದು ಮೂಲ ಕಲ್ಪನೆಗಳ' ಮೇಲೆ ಸಾಕಾರಗೊಂಡ ಈ ಚಳವಳಿ ಅನೇಕ ಬದಲಾವಣೆಗಳನ್ನು ಕಂಡಿವೆ.

ಸಮವಸ್ತ್ರ, ಯುವ ಕಾರ್ಯಕ್ರಮ, ತರಬೇತಿ ವಿಧಾನಗಳು ಮುಂತಾದವುಗಳಲ್ಲಿ ದೇಶದಿಂದ ದೇಶಕ್ಕೆ ವ್ಯತ್ಯಾಸಗಳು ಕಂಡು ಬಂದರೂ ಸಹ ಮೂಲ ಕಲ್ಪನೆಗಳಿಗೆ ಧಕ್ಕೆ ಬಾರದಂತೆ ಎಚ್ಚರಿಕೆ ವಹಿಸಲಾಗಿದೆ. ಅವು ಶಾಶ್ವತ ಮೌಲ್ಯಗಳು.

ಸ್ಕೌಟ್ ಚಳವಳಿಯ ವಿಶ್ವ ಸಂಘಟನೆಯು (WOSM) ಆಗಿದ್ದಾಗ್ಗೆ ಈ ಚಳವಳಿಯ ಕಾರ್ಯಕ್ರಮಗಳಲ್ಲಿ, ಧೋರಣೆಗಳಲ್ಲಿ, ತರಬೇತಿ ವಿಧಾನಗಳಲ್ಲಿ ತರಬೇಕಾದ ಬದಲಾವಣೆಗಳ (ಕಾಲ ದೇಶಕ್ಕನುಗುಣವಾಗಿ) ಬಗ್ಗೆ ತನ್ನ ಸದಸ್ಯ ರಾಷ್ಟ್ರಗಳೊಂದಿಗೆ ಚರ್ಚಿಸಿ, ನಂತರ ಸೂಕ್ತ ನಿರ್ದೇಶನಗಳನ್ನು ಮತ್ತು ಮಾರ್ಗದರ್ಶಿ ಸೂತ್ರಗಳನ್ನು ನೀಡಿ, ಅವುಗಳ ಆಧಾರದ ಮೇಲೆ ಆಯಾ ದೇಶಗಳು ತಮ್ಮದೇ ಆದ ನೀತಿ ನಿಯಮಾವಳಿಗಳನ್ನು ರೂಪಿಸಿ ಕೊಳ್ಳಲು ಸೂಚಿಸುತ್ತದೆ.

ಅದರಂತೆ ಈ ಶತಮಾನದ ಆದಿಯಲ್ಲಿ ವಿಶ್ವ ಸಂಘಟನೆಯು ನೀಡಿದ ಧ್ಯೇಯ ನಿರೂಪಣೆಯ ಆಧಾರದ ಮೇಲೆ, ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು ತನ್ನದೇ ಆದ ದರ್ಶನ (VISION) ಕಂಡು ಕೊಂಡಿತು. ಅದು ಇಂತಿದೆ.

**"ಅತ್ಯಂತ ದೊಡ್ಡ ಯುವಚಳವಳಿಯಾದ**
**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯು**
**2013ರ ವೇಳೆಗೆ**
**ಸ್ವಾವಲಂಬಿಯಾದ ಮೌಲ್ಯಾಧಾರಿತವಾದ**
**ಗುಣನಿರ್ದೇಶಿತ ಉತ್ತಮ ಆಡಳಿತ ವ್ಯವಸ್ಥೆ**
**ಹೊಂದಿದ ಮತ್ತು ಯುವ ಜನತೆಯ**
**ಅವಶ್ಯಕತೆಗಳಿಗೆ ಅನುಸಾರವಾಗಿ**
**ಸವಾಲಿನಿಂದ ಕೂಡಿದ**
**ನವೀನವಾದ ಕಾರ್ಯಕ್ರಮಗಳನ್ನು**
**ನೀಡುವ ಸಂಸ್ಥೆ ಆಗುತ್ತದೆ".**

ನಮ್ಮ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆ ಅನೇಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಾಗ ಅದಕ್ಕಾಗಿ ಬೇಕಾಗುವ ಸಂಪನ್ಮೂಲಗಳನ್ನು ಕ್ರೋಢೀಕರಿಸುವಲ್ಲಿ ನಾವು ಸ್ವಾವಲಂಬಿಗಳಾಗಬೇಕೆಂಬುದೇ ದರ್ಶನದ ಮೊದಲಿನ ಅಂಶ. ಪ್ರಸ್ತುತ ಲಭ್ಯವಿರುವ ಸಂಪನ್ಮೂಲಗಳನ್ನು ಮತ್ತಷ್ಟು

ಅಭಿವೃದ್ಧಿ ಪಡಿಸುವುದೂ ಸಹ ಇದರಲ್ಲಿ ಅಡಕವಾಗಿದೆ. ದಳಮಟ್ಟದಿಂದ ಹಿಡಿದು ರಾಷ್ಟ್ರೀಯ ಮಟ್ಟದವರೆಗೆ ಸ್ವಾವಲಂಬಿಗಳಾಗಬೇಕು. ಸ್ವಂತ ನಿವೇಶನ, ಸ್ವಂತ ಕಟ್ಟಡ, ಚಟುವಟಿಕೆಗಳಿಗಾಗಿ ಪುದುವಟ್ಟು ಸ್ಥಾಪನೆ, ಶಾಶ್ವತ ಆರ್ಥಿಕ ಮೂಲ ಇತ್ಯಾದಿಗಳು.

ನಮ್ಮ ಸಂಸ್ಥೆಯು ಮೌಲ್ಯಾಧಾರಿತ ಸಂಸ್ಥೆಯಾಗಬೇಕಾದರೆ ತರಬೇತಿ ಹೊಂದಿದ ಶಿಕ್ಷಕರು ಸ್ಕೌಟ್ ಪ್ರತಿಜ್ಞೆ ಮತ್ತು ನಿಯಮಕ್ಕೆ ಬದ್ಧರಾಗಿ ದುಡಿಯಲು ಹಾಗೂ ತನ್ಮೂಲಕ ಸ್ಕೌಟ್‌ಗಳಿಗೆ ಉತ್ತಮ ಮೌಲ್ಯಾಧಾರಿತ ಶಿಕ್ಷಣವನ್ನು ನೀಡಲು ಸಿದ್ಧರಾಗಬೇಕು. ಹಾಗಾದಾಗ ನೀತಿವಂತ ಸಮಾಜದ ನಿರ್ಮಾಣ ಸಾಧ್ಯ. ಇದು ಭಾರತದ ಇಂದಿನ ಅವಶ್ಯಕತೆಯೂ ಹೌದು. ನಮ್ಮ ಸಂಸ್ಥೆಯ ಆಡಳಿತ ವ್ಯವಸ್ಥೆಯೂ ಕೂಡ ಮೌಲ್ಯಾಧಾರಿತವಾಗಿರಬೇಕು.

ನಾವು ನೀಡುವ ತರಬೇತಿಯು, ಮಕ್ಕಳಲ್ಲಿ ಕಲಿಯುವ ಆಸಕ್ತಿಯನ್ನು ಹೆಚ್ಚುಸುವಂತಿರಬೇಕು. ಇಲ್ಲಿ ನೀಡುವ ಪದಕಗಳು, ಪ್ರಶಂಸಾ ಪತ್ರಗಳು, ಪ್ರಾಮಾಣಿಕವಾಗಿ ಅರ್ಹತೆಯ ಆಧಾರದ ಮೇಲೆ ನೀಡಲ್ಪಡಬೇಕು. ಶ್ರಮವಹಿಸಿ ಗಳಿಸಿದ ಮಕ್ಕಳು ಧನ್ಯತಾಭಾವ ಪಡೆಯುತ್ತಾರೆ. ಪದಕಗಳ 'ಗಳಿಕೆ'ಯಾಗಬೇಕೆ ಹೊರತು 'ನೀಡಿಕೆ'ಯಾಗಬಾರದು. ಗಳಿಸಿದ ಪದಕಗಳಿಗೂ, ಪ್ರಶಂಸಾ ಪತ್ರಗಳಿಗೂ ಒಂದು ಮೌಲ್ಯವನ್ನು ನೀಡದಂತಾಗುತ್ತದೆ. ವಯಸ್ಕ ನಾಯಕರ ವಿಷಯದಲ್ಲಿಯೂ ಸಹ ಇದೇ ಮಾನದಂಡ ಅನುಸರಿಸಬೇಕು. ಅಂದರೆ ಪ್ರತಿಯೊಂದು ಹಂತದಲ್ಲಿಯೂ ಸಂಖ್ಯಾಬಾಹುಳ್ಯಕ್ಕೆ ಮಹತ್ವ ನೀಡದೆ, ಗುಣ ನಿರ್ದೇಶನಕ್ಕೆ ಮಹತ್ವ ನೀಡಬೇಕು.

ನಮ್ಮ ಆಡಳಿತ ವ್ಯವಸ್ಥೆಯಲ್ಲಿರುವ ಲೋಪದೋಷಗಳನ್ನು ತಿದ್ದಿಕೊಳ್ಳುವಲ್ಲಿ ಪ್ರತಿಷ್ಠೆಯ ಪ್ರಶ್ನೆಯನ್ನು ಮುಂದೆ ಮಾಡದೆ, ಆಡಳಿತ ವ್ಯವಸ್ಥೆಯನ್ನು ಹೆಚ್ಚು ಪಾರದರ್ಶಕವಾಗಿಸಲು ಪ್ರಯತ್ನಿಸಬೇಕು. ಪ್ರತಿಯೊಬ್ಬ ನೌಕರನೂ ತನ್ನ ಜವಾಬ್ದಾರಿಯನ್ನು ಅರಿತು ತನ್ನ ಅಧಿಕಾರದ ಇತಿಮಿತಿಗಳಲ್ಲಿ ಅಚ್ಚುಕಟ್ಟಾಗಿ, ಪ್ರೀತಿಯಿಂದ ಕಾರ್ಯನಿರ್ವಹಿಸಬೇಕು. ಸಂಸ್ಥೆಯ ಸಂವಹನ ಪ್ರಕ್ರಿಯೆಗಳು ಉತ್ತಮಗೊಳ್ಳಬೇಕು. ಸಂಘಟನೆಯ ಎಲ್ಲಾ ಮಟ್ಟದ ನೌಕರರೂ ಅಧಿಕಾರಿಗಳೂ ತಮ್ಮ ತಮ್ಮ ಕರ್ತವ್ಯಗಳನ್ನು ಜವಾಬ್ದಾರಿಯುತವಾಗಿ ನಿರ್ವಹಿಸಬೇಕು. ಹಿಂದೆ ಯಶಸ್ವಿಯಾಗಿ ಕಾರ್ಯನಿರ್ವಹಿಸಿದ ಅನುಭವಿ ತರಬೇತುದಾರರ ಮಾರ್ಗದರ್ಶನ ಪಡೆಯಬಹುದಾಗಿದೆ.

ಇಂದಿನ ಯುವಜನತೆಯ ಮುಂದೆ ಅನೇಕ ಸವಾಲುಗಳಿವೆ. ಜಾಗತೀಕರಣದ ಪರಿಣಾಮವಾಗಿ, ಅನೇಕ ಹೊಸ ಹೊಸ ಅವಕಾಶಗಳು ಅವರಿಗೆ ತೆರೆದಿವೆ. ಅವರಲ್ಲಿನ ಚೈತನ್ಯ ಸರಿಯಾದ ಹಾದಿಯಲ್ಲಿ ಹರಿಯುವಂತಾದರೆ ಹೊಸ ಸವಾಲುಗಳನ್ನು ಎದುರಿಸಲು ಯುವಜನಕ ಸಧ್ಯವಾಗುವಂತಹ ನವೀನವಾದ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಬೇಕಾಗಿದೆ. ಇಂದಿನ ಯುವಜನತೆಗೆ ಸವಾಲುಗಳನ್ನು ಎದುರಿಸುವುದೆಂದರೆ ಬಹಳ ಖುಷಿ. ಅದಕ್ಕೆ ತಕ್ಕಂತೆ ಪಠ್ಯವಸ್ತು ಬದಲಾಗಬೇಕು. ಇದರ ಬಗ್ಗೆ ಅನುಭವಿಗಳು ಹಿರಿಯರು ಚಿಂತನೆ ನಡೆಸಬೇಕಾಗಿದೆ.

2013ರ ವೇಳೆಗೆ ಮೇಲಿನ ಎಲ್ಲಾ ಅಂಶಗಳನ್ನು ನಮ್ಮಲ್ಲಿ ಅವಳಡಿಸಿಕೊಳ್ಳುವ ಪ್ರಾಮಾಣಿಕ ಪ್ರಯತ್ನವನ್ನು ನಡೆಸಿದಲ್ಲಿ ವಿಶ್ವ ಸಂಘಟನೆಯು (WOSM) ನೀಡಿದ ಧ್ಯೇಯಕ್ಕೆ ಅನುಗುಣವಾಗಿ ರೂಪುಗೊಂಡ ಸಂಸ್ಥೆಯು ನಮ್ಮದಾಗುತ್ತದೆ. ಆ ದಿಕ್ಕಿನತ್ತ ನಮ್ಮೆಲ್ಲರ ಪ್ರಯತ್ನಸಾಗಲಿ.

❑



## ಸ್ಕೌಟ್ ಕೌಶಲ್ಯ

## ಶಿಬಿರಾಗ್ನಿ ಉದಂತ ಸಂ-1

# ಸ್ಕೌಟುಗಳ ಕೆಲಸ

### ಶಾಂತಿ ಸಮಯದ ಸ್ಕೌಟುಗಳು - ಕಿಂ - ಮೆಫೆಕಿಂಗ್ ಬಾಲಕರು

ಪ್ರತಿಬಾಲಕನೂ, ಒಂದಲ್ಲ ಒಂದು ರೀತಿಯಲ್ಲಿ, ತನ್ನ ದೇಶಕ್ಕೆ ಸೇವೆಯನ್ನು ಸಲ್ಲಿಸಲು ಬಯಸುತ್ತಾನೆಂದು ಭಾವಿಸುತ್ತೇನೆ. ಅವನು ಆ ರೀತಿಯಲ್ಲಿ ಸೇವೆಯನ್ನು ಸಲ್ಲಿಸಬೇಕಾದರೆ, ಒಂದು ಸುಲಭವಾದ ಮಾರ್ಗವಿದೆ. ಅದೇ ಬಾಯ್ ಸ್ಕೌಟ್ ಆಗುವುದು.

ನಿಮಗೆ ತಿಳಿದಂತೆ ಸೈನ್ಯದಲ್ಲಿ ಸೈನಿಕ ಸ್ಕೌಟ್‌ಗಳಿರುತ್ತಾರೆ. ಅವರ ಬುದ್ಧಿವಂತಿಕೆ, ಮುನ್ನುಗ್ಗುವ ಧೈರ್ಯ ಮತ್ತು ಉತ್ಸಾಹಗಳ ಆಧಾರದ ಮೇಲೆ ಅವರನ್ನು ಆರಿಸಲಾಗುತ್ತದೆ. ಅವರು ಮುಂದಾಗಿ ಹೋಗಿ, ಶತ್ರುಗಳ ಚಲನವಲನಗಳನ್ನು ಕಂಡುಕೊಂಡು, ಸೈನ್ಯದ ದಂಡಾಧಿಕಾರಿಗಳಿಗೆ, ವಿಷಯಗಳನ್ನು ವರದಿ ಮಾಡುತ್ತಾರೆ.

ಈ ರೀತಿಯ ಯುದ್ಧ ಕಾಲದ ಸ್ಕೌಟುಗಳಲ್ಲದೆ, ಶಾಂತಿ ಸಮಯದಲ್ಲಿ ಸಹ ಸ್ಕೌಟುಗಳನ್ನು ಕಾಣಬಹುದು. ಅವರೂ ಸಹ ಅಷ್ಟೇ ಕೆಚ್ಚು ಮತ್ತು ವ್ಯಾವಹಾರಿಕ ಜಾಣತನದ ಆವಶ್ಯಕತೆಯಿರುವ ಕೆಲಸಗಳನ್ನು ಮಾಡುತ್ತಾರೆ. ಅವರೇ ವಿಶ್ವದ ಗಡಿನಾಡು ಜನರು *(Frontiersmen)*.

ಉತ್ತರ ಅಮೆರಿಕಾದ ಆದಿ ಪರಿಶೋಧಕರು *(Pioneers)* ಮತ್ತು ಬೋನಿಗರು *(Trappers)*; ದ. ಅಮೆರಿಕಾದ ನೆಲಸುನಾಡಿಗರು *(Colonists)*; ಮಧ್ಯ ಆಫ್ರಿಕಾದ ಬೇಟೆಗಾರರು; ಏಷಿಯಾ ಖಂಡದ ಮತ್ತು ವಿಶ್ವದ ಎಲ್ಲಾ ನಿರ್ಜಲ ಪ್ರದೇಶಗಳ ಪರಿಶೋಧಕರು *(Explorers)* ಮತ್ತು ಧರ್ಮ ಪ್ರಚಾರಕರು *(Missionaries)*; ಆಸ್ಟ್ರೇಲಿಯಾದ ಪೊದೆಗಾಡು ನಿವಾಸಿಗರು *(Bushmen)* ಮತ್ತು ದನದ ವ್ಯಾಪಾರಿಗಳು *(Drovers)*; ವಾಯುವ್ಯ ಕೆನಡಾ ಮತ್ತು ದಕ್ಷಿಣ ಆಫ್ರಿಕಾದ ಪೋಲೀಸು ದಳದವರು *(Constabulary)* ಇವರೆಲ್ಲರೂ ಶಾಂತಿ ಸಮಯದ ಸ್ಕೌಟ್‌ಗಳು. ಅರ್ಥಾತ್ ಶಾಂತಿ ಪಾಲಕರು. ಸ್ಕೌಟ್ ಕೌಶಲ್ಯದಲ್ಲಿ ನಿಷ್ಣಾತರು. ಅವರುಗಳು ಕಾಡಿನ ಹೊರಾಂಗಣದಲ್ಲಿ / ಬಯಲಿನಲ್ಲಿ *(Outdoors)*

**"ದಯವಿಟ್ಟು ಗಮನಿಸಿ"**

ಜನವರಿ 2008 ರಿಂದ ಪ್ರಾರಂಭಿಸಿ ಬಾಲಕರಿಗಾಗಿ ಸ್ಕೌಟಿಂಗ್ ಪುಸ್ತಕದ ಪ್ರತಿಯೊಂದು ಉದಂತವನ್ನು (YARN) ತಿಂಗಳಿಗೊಂದರಂತೆ ಪ್ರಕಟಿಸಲಾಗುವುದು. ದಳನಾಯಕರುಗಳು ಹಾಗೂ ಸ್ಕೌಟುಗಳು ಇವುಗಳನ್ನು ಸಂಗ್ರಹಿಸಿಟ್ಟುಕೊಂಡರೆ ಅತ್ಯಂತ ಉಪಯುಕ್ತವಾಗುತ್ತದೆ.

*– ಸಂಪಾದಕರು*

**ಗಮನಿಸಿ**

1. ಸ್ಕೌಟ್ ಲಾಗ್ ಬುಕ್, ಭಾಗ-1 ಮತ್ತು ಭಾಗ-2
2. ಗೈಡ್ ಲಾಗ್ ಬುಕ್, ಭಾಗ-1 ಮತ್ತು ಭಾಗ-2
3. ರಾಜ್ಯ ಪುರಸ್ಕಾರ ಅರ್ಜಿ ಫಾರಂಗಳು.

ಸಾಮಾಗ್ರಿ ಮಳಿಗೆಯಲ್ಲಿ ಮಾರಾಟಕ್ಕೆ ಲಭ್ಯವಿರುತ್ತದೆ.

ಹೇಗೆ ಜೀವನ ನಡೆಸಬೇಕೆಂದು ತಿಳಿದವರು. ಅವರುಗಳು ಎಲ್ಲೇ ಇರಲಿ, ಸಣ್ಣ ಪುಟ್ಟ ಕುರುಹುಗಳು *(Signs)* ಮತ್ತು ಹೆಜ್ಜೆ ಗುರುತುಗಳನ್ನು *(Tracks)* ಪತ್ತೆಹಚ್ಚಿ, ಅವುಗಳ ನಿಜವಾದ ಅರ್ಥವನ್ನು ಮನಗಂಡು, ತಮ್ಮ ದಾರಿಯನ್ನು ಕಂಡುಕೊಳ್ಳಬಲ್ಲರು. ಡಾಕ್ಟರುಗಳಿಂದ ದೂರವಿರುವ ತಮ್ಮ ಆರೋಗ್ಯದ ಬಗ್ಗೆ ತಾವು ನೋಡಿಕೊಳ್ಳುವುದನ್ನು ತಿಳಿದಿರುತ್ತಾರೆ. ಅವರು ಬಲಶಾಲಿಗಳಾಗಿಯೂ, ಧೈರ್ಯವಂತರಾಗಿಯೂ ಇದ್ದು, ಯಾವುದೇ ರೀತಿಯ ಅಪಾಯವನ್ನೂ ಎದುರಿಸಲು ತಯಾರಾಗಿರುತ್ತಾರೆ. ಪರಸ್ಪರ ಸಹಾಯಕರಾಗಿರುತ್ತಾರೆ. ತಮ್ಮ ದೇಶದ ರಕ್ಷಣೆಗಾಗಿ, ಪ್ರಾಣವನ್ನು ತೆರಲೂ ಸಹ ಹೆದರುವುದಿಲ್ಲ.

*ಗಡಿನಾಡು ಜನರ ಉದಾತ್ತ ಜೀವನವನ್ನು ನಡೆಸಬೇಕಾದರೆ ನೀವು ಮುಂದೊದಗಬಹುದಾದ ಕಷ್ಟಗಳನ್ನೆದುರಿಸಲು ಮೊದಲೇ ತಯಾರಾಗಬೇಕು.*

ಕಾರ್ಯಸಾಧನೆಗಾಗಿ, ತಮ್ಮ ಬಯಕೆ ಮತ್ತು ಸೌಖ್ಯಗಳನ್ನು ಬದಿಗೊತ್ತುತ್ತಾರೆ. ಆ ರೀತಿ ಮಾಡುವುದು ತಮ್ಮ ಕರ್ತವ್ಯವೆಂದು ಭಾವಿಸುತ್ತಾರೆ.

ಗಡಿನಾಡು ಜನರ ಜೀವನವು ಉದಾತ್ತ ಜೀವನವೇ ಸರಿ. ಆದರೆ ಎಲ್ಲರೂ ಇದ್ದಕ್ಕಿದ್ದಂತೆ ಆ ರೀತಿ ಜೀವಿಸಲು ಬರುವುದಿಲ್ಲ. ಅದಕ್ಕಾಗಿ ತಯಾರಿ ಮಾಡಿಕೊಳ್ಳಬೇಕು. ಯಾರು ಬಾಲಕರಾಗಿದ್ದಾಗ ಸ್ಕೌಟುಗಳಾಗಿರುತ್ತಾರೆಯೋ ಅವರು ಅಂತಹ ತುಂಬು ಜೀವನವನ್ನು ನಡೆಸುವುದರಲ್ಲಿ ವಿಜಯಿಗಳಾಗುತ್ತಾರೆ. ನೀವು ಮುಂದೆ ಯಾವುದೇ ರೀತಿಯ ಜೀವನವನ್ನು ನಡೆಸಲು ಉದ್ದೇಶಿಸಿದರೂ ಸರಿ, ಸ್ಕೌಟಿಂಗ್ ಉಪಯೋಗಕ್ಕೆ ಬರುತ್ತದೆ.

ಖ್ಯಾತ ವಿಜ್ಞಾನಿಯೊಬ್ಬರು ಸ್ಕೌಟಿಂಗ್ ಬಗ್ಗೆ ಹೀಗೆ ಹೇಳುತ್ತಾರೆ. "ವಿಜ್ಞಾನಿಯಾಗಬಯಸುವವರಿಗೆ ಇದು ಬಹಳ ಅಮೂಲ್ಯವಾದುದು." ಖ್ಯಾತ ಡಾಕ್ಟರೊಬ್ಬರು, ಸ್ಕೌಟಾದವನು ಸಣ್ಣಪುಟ್ಟ ಕುರುಹುಗಳನ್ನು ಅವಲೋಕಿಸಿ, ಅವುಗಳ ಅರ್ಥವನ್ನು ತಿಳಿದುಕೊಳ್ಳುವ ರೀತಿಯಲ್ಲಿ, ಡಾಕ್ಟರು ಅಥವಾ ಶಸ್ತ್ರವೈದ್ಯರುಗಳು ಮಾಡಬೇಕಾದುದರ ಆವಶ್ಯಕತೆಯನ್ನು ಒತ್ತಿ ಹೇಳಿದ್ದಾರೆ.

*ಪ್ರಪಂಚದ ಎಲ್ಲೆಡೆಯಲ್ಲಿಯೂ ನೆಲಸುನಾಡಿಗರು, ಪರಿಶೋಧಕರು ಮುಂತಾದವರೆಲ್ಲರೂ ಸ್ಕೌಟುಗಳು. ತಮ್ಮ ಯೋಗಕ್ಷೇಮವನ್ನು ತಾವು ನೋಡಿಕೊಳ್ಳುವುದು ಅವರಿಗೆ ತಿಳಿದಿರಬೇಕು.*

ನೀವು ಹೇಗೆ ಸ್ಕೌಟ್ ಕೌಶಲ್ಯಗಳನ್ನು ತಿಳಿದುಕೊಳ್ಳಬಹುದು ಮತ್ತು ಅದನ್ನು ಮನೆಯಲ್ಲಿ ಹೇಗೆ ಬಳಸಿಕೊಳ್ಳಬಹುದು ಎಂಬ ಬಗ್ಗೆ ನಾನಿಲ್ಲಿ ತೋರಿಸಿಕೊಡುತ್ತೇನೆ. ಅದನ್ನು ಕಲಿಯುವುದು ಸುಲಭವೂ, ಸ್ವಾರಸ್ಯಕರವೂ ಆಗಿರುತ್ತದೆ.

ಸ್ಕೌಟಾಗಿ ಸೇರಿ, ನೀವು ಅದನ್ನು ಸುಲಭವಾಗಿ ಕಲಿಯಬಹುದು.

## 'ಕಿಮ್'ನ ಸಾಹಸಗಳು

ರಡ್ಯಾರ್ಡ್ ಕಿಪ್ಲಿಂಗ್‌ರವರ 'ಕಿಮ್'ನ ಕತೆಯಲ್ಲಿ, ಸ್ಕೌಟುಗಳು ಏನು ಮಾಡಬಹುದು? ಎಂಬುದಕ್ಕೆ ಒಳ್ಳೆಯ ಉದಾಹರಣೆಯು ಸಿಗುತ್ತದೆ.

'ಕಿಮ್'ನ ಪೂರಾ ಹೆಸರು "ಕಿಮ್ ಬಾಲ್ ಓಹ್ಯಾರಾ." ಅವನು ಇಂಡಿಯಾದಲ್ಲಿದ್ದ ಐರಿಷ್ ರೆಜಿಮೆಂಟ್ ಒಂದರ ಸಾರ್ಜೆಂಟ್‌ರವರ ಮಗನಾಗಿದ್ದನು. ಅವನಿನ್ನೂ ಮಗುವಾಗಿದ್ದಾಗಲೇ, ಅವನ ತಂದೆ ತಾಯಿಗಳು ತೀರಿಕೊಂಡಿದ್ದರು. ಆ ಕಾರಣ ಸೋದರತ್ತೆಯ ಆಶ್ರಯದಲ್ಲಿ ಆ ಮಗುವು ಬೆಳೆಯಿತು.

ಅವನ ಜೊತೆಯ ಆಟಗಾರರೆಲ್ಲರೂ, ಇಂಡಿಯಾದ ಬಾಲಕರೇ ಆದ್ದರಿಂದ, ಅವನು ಅವರ ಭಾಷೆಯನ್ನು ಮಾತನಾಡುವುದನ್ನೂ, ಅವರ ರೀತಿ ನೀತಿಗಳನ್ನು ಕಲಿತನು. ಅವನು ವಯಸ್ಸಾದ ಒಬ್ಬ ಅಲೆಮಾರಿ ಸನ್ಯಾಸಿಯೊಡನೆ ನಿಕಟವಾದ ಸ್ನೇಹವನ್ನು ಬೆಳೆಸಿ, ಅವನ ಜೊತೆಯಲ್ಲಿ ಉತ್ತರ ಭಾರತದಲ್ಲೆಲ್ಲಾ ಓಡಾಡಿದನು.

ಒಂದು ದಿನ ತನ್ನ ತಂದೆಯ ಸಾರ್ಜೆಂಟ್ ಆಗಿದ್ದ ಸೈನ್ಯ ತುಕಡಿಯು, ಪಥಚಲನದಲ್ಲಿರುವುದನ್ನು ಆಕಸ್ಮಾತ್ತಾಗಿ ಕಂಡನು. ಅದರ ಶಿಬಿರಕ್ಕೆ ಭೇಟಿಯಿತ್ತನು. ದುರದೃಷ್ಟವಶಾತ್, ಕಳ್ಳನೆಂಬ ಗುಮಾನಿಯ ಮೇಲೆ ಅವನನ್ನು ಸೆರೆಹಿಡಿದರು. ಅವನಲ್ಲಿ ಜನನ ಪ್ರಮಾಣ ಪತ್ರ ಮತ್ತು ಇತರ ದಾಖಲೆಗಳು ದೊರಕಿದುದರಿಂದ, ಅವನು ತಮ್ಮಲ್ಲೊಬ್ಬನೆಂಬುದನ್ನು ತಿಳಿದರು. ಅವನ ಪೋಷಣೆಯ ಭಾರ ವಹಿಸಿ ಶಿಕ್ಷಣವನ್ನು ಕೊಡಲು ಪ್ರಾರಂಭಿಸಿದರು. ಆದರೆ ರಜೆಯ ಕಾಲದಲ್ಲಿ ಅವನು ಮನೆಗೆ ಹೋದಾಗಲೆಲ್ಲಾ ಇಂಡಿಯಾದ ಬಾಲಕರಂತೆಯೇ ಉಡಿಗೆ ತೊಡಿಗೆಗಳನ್ನು ಧರಿಸಿ ಅವರಲ್ಲೊಬ್ಬನಾಗಿ ಬೆರೆಯುತ್ತಿದ್ದನು.

ಸ್ವಲ್ಪ ಕಾಲದ ಬಳಿಕ ಅವನಿಗೆ ಲರ್ಗನ್ ಎಂಬುವರೊಡನೆ ಪರಿಚಯ ಆಯಿತು. ಲರ್ಗನ್‌ರವರು ಹಳೆಯ ಆಭರಣಗಳು ಮತ್ತು ಅಪೂರ್ವ ವಸ್ತುಗಳ ಮಾರಾಟಗಾರರಾಗಿದ್ದರು. ಅವರಿಗೆ ಇಂಡಿಯನ್ನರ ಬಗ್ಗೆ ತಿಳುವಳಿಕೆಯಿದ್ದ ಕಾರಣ ಸರ್ಕಾರದ ಗೂಢಚಾರ ಇಲಾಖೆಯಲ್ಲಿ ಸಹ ಕೆಲಸ ಮಾಡುತ್ತಿದ್ದರು.

ಇಂಡಿಯನ್ನರ ಆಚಾರ ವಿಚಾರ ವ್ಯವಹಾರಗಳ ಬಗೆಗೆ 'ಕಿಂ'ಗೆ ಒಳ್ಳೆಯ ಪರಿಜ್ಞಾನವಿರುವುದನ್ನು ಕಂಡ ಅವರು, ಅವನು ಸರ್ಕಾರದ ಗೂಢಚಾರ ಇಲಾಖೆಗೆ ಒಬ್ಬ ಉಪಯುಕ್ತ ನಿಯೋಗಿ *(Agent)* ಆಗುತ್ತಾನೆಂಬುದನ್ನು ಮನಗಂಡು, ಸೂಕ್ಷ್ಮ ವಿಷಯಗಳನ್ನು ಗ್ರಹಿಸುವ ಮತ್ತು ಜ್ಞಾಪಕದಲ್ಲಿಟ್ಟುಕೊಳ್ಳುವ ಬಗ್ಗೆ 'ಕಿಮ್'ಗೆ ತರಬೇತಿ ನೀಡಿದರು. ಇದು ಸ್ಕೌಟ್ ಶಿಕ್ಷಣದಲ್ಲಿ ಬಹು ಮುಖ್ಯ ಅಂಶವಾಗಿದೆ.

### 'ಕಿಮ್'ನ ತರಬೇತಿ

ಮೊದಲಿಗೆ ಲರ್ಗನ್‌ರವರು, ಒಂದು ಹರಿವಾಣದಲ್ಲಿ *(Tray)* ವಿವಿಧ ರೀತಿಯ ಬೆಲೆ ಬಾಳುವ, ಮುತ್ತು ರತ್ನಗಳನ್ನು ತೋರಿಸುತ್ತಿದ್ದರು. ಒಂದು ನಿಮಿಷ ಕಾಲ ಅವನ್ನು ನೋಡಿದ ಬಳಿಕ, ಬಟ್ಟೆಯಿಂದ ಮುಚ್ಚಿ, ಎಷ್ಟು ಹರಳುಗಳಿದ್ದುವು? ಮತ್ತು ಅವು ಯಾವ ರೀತಿಯವು? ಮುಂತಾದ ವಿವರಗಳನ್ನು ಕೇಳುತ್ತಿದ್ದರು. ಮೊದಲಿಗೆ ಕಿಮ್ ಕೆಲವನ್ನು ಮಾತ್ರ ನೆನಪಿನಲ್ಲಿಟ್ಟುಕೊಳ್ಳಬಲ್ಲವನಾಗಿದ್ದನು ಮತ್ತು ಅವುಗಳನ್ನು ನಿಶಿತವಾಗಿ ವಿವರಿಸಲು ಬರುತ್ತಿರಲಿಲ್ಲ. ಕ್ರಮೇಣ, ಸ್ವಲ್ಪ ಅಭ್ಯಾಸವಾದಂತೆ, ಎಲ್ಲವನ್ನೂ ನೆನೆಪಿನಲ್ಲಿಟ್ಟುಕೊಳ್ಳುವಂತಾದನು. ಅದೇ ರೀತಿಯಲ್ಲಿ, ಅವನಿಗೆ ತೋರಿಸುತ್ತಿದ್ದ ಇತರ ವಸ್ತುಗಳ ಬಗ್ಗೆಯೂ ಜಾಗರೂಕನಾದನು.

ಕೊನೆಗೆ ಇನ್ನು ಇತರ ರೀತಿಯ ತರಬೇತಿಯನ್ನು ನೀಡಿದ ಬಳಿಕ, ಕಿಮ್‌ನನ್ನು ಗೂಢಚಾರ ಇಲಾಖೆಯ ಸದಸ್ಯನನ್ನಾಗಿ ಮಾಡಲಾಯಿತು ಮತ್ತು ಅವನಿಗೆ ರಹಸ್ಯ ಗುರುತುಗಳನ್ನು ಎಂದರೆ ಕೊರಳಿನ ಸುತ್ತಲೂ ಧರಿಸುವ ಲಾಕೆಟ್‌ನ್ನು ಕೊಡಲಾಯಿತು. ಅಲ್ಲದೆ ಅವನು ಆ ರಹಸ್ಯ ಸೇವೆಗೆ ಸೇರಿದವನೆಂದು ಅರ್ಥ ಬರುವ ವಿಶೇಷ ರೀತಿಯಲ್ಲಿ ಹೇಳುವ "ವಾಕ್ಯ"ವನ್ನು ನೀಡಲಾಯಿತು.

.....ಮುಂದುವರೆಯುವುದು

### 60ನೇ ರಾಜ್ಯಮಟ್ಟದ ವೃಕ್ಷಣಿಧಾರಕರ ಸಮಾವೇಶ, ಇಂಡಬಾ–1

ಧಾರವಾಡ ಜಿಲ್ಲೆಯ "ಸಸ್ಯ ಚೇತನ" ತರಬೇತಿ ಕೇಂದ್ರದಲ್ಲಿ ದಿನಾಂಕ 6-2-2008 ರಿಂದ 9-2-2008ರ ವರೆಗೆ 60ನೇ ರಾಜ್ಯ ಮಟ್ಟದ ವೃಕ್ಷಮಣಿಧಾರಕರ ರಾಜ್ಯ ಮಟ್ಟದ ಸಮಾವೇಶ ನಡೆಯಲಿದೆ. ಇದರ ಬಗ್ಗೆ ಈಗಾಗಲೇ ಜಿಲ್ಲೆಗಳಿಗೆ ಸುತ್ತೋಲೆ ಕಳುಹಿಸಲಾಗಿದೆ. ನಿಮಗೆ ಸಂಬಂಧಪಟ್ಟ ಜಿಲ್ಲಾ ಸಂಸ್ಥೆಗಳನ್ನು ಸಂಪರ್ಕಿಸಿ ಹೆಚ್ಚಿನ ವಿವರ ಪಡೆದು ಸಮಾವೇಶದಲ್ಲಿ ಭಾಗವಹಿಸಲು ಕೋರಿಕೆ.

- ರಾಜ್ಯ ಕಾರ್ಯದರ್ಶಿ

# Your Attitude

*- Jogendar Singh* IPS
Rtd. CBI Director,
Former Director of Youth Services & Sports, Karnataka

*A critical success factor in our lives is the right mental attitude. Just how important is attitude? A study by Harvard University showed that 85% of the reasons for success, accomplishments, promotions, etc. were because of the attitudes, and only 15% because of technical expertise. Not only in our educational set up, but in the society itself, we seem to have reversed this process. Attitudes do make the difference. When our attitude is correct and right, our abilities attain maximum of effectiveness, and good results inevitably emerge. And we see this time and again in everyday life. Departmental Stores with the right attitudes outperform their" attitude challenged" peers. Right attitudes make all the difference, whether it is dealing with people, spouse, children, parents, friends, superiors, subordinates or co-workers. It is the attitudes, which help us, to win in any and every situation in life.*

*The next question, which arises, is, as what can be done to improve our attitudes. The first step is by improving our enthusiasm. Enthusiasm, or lack of it, is visible in everything we do and say. The right attitude is greatly affected by our level of enthusiasm. Talk only about positive and good news with your friends and family. Encourage your children and all people you come in contact and praise them as often as you can. Be altruistic and helpful. Offer praise as often as you can. Lavish appreciation for genuine achievement. Compliments are both easy to give, and easy not to give. Most of the time, we quickly recognise and praise big accomplishments. The little things, which are done well, are not even noticed. Infact, sometimes they are even more important. It will be a good idea for harmonious and smooth relationships, to develop the habit of noticing, and commenting on, appearance, routine tasks that have been well done, ideas and efforts. Be grateful, and show your gratitude to others.*

*Being enthusiastic, will change your attitude, and it will also change the perception and approach of others.*

*Attitude is both infectious and contagious. We must choose carefully, the people we come in contact with us and those who are around us. We should also become conscious, as to how our own attitude is affecting those around us. Our effort should be, to be a positive role model, full of a great, and an enthusiastic attitude. This will not only profoundly affect our own success and well being, but that of others', with whom you might come in contact. Always be smiling with, your eyes, your gestures, posture and conversion. Instead of plodding through the day, make a conscious effort to be more upbeat. Make others feel important. Be truly interested in what others have to communicate. Our interest in others, sends the message that what they have to say is important. This approach will win many admirers and friends. It will also create the least resistance to your quest. For this, each one of us, needs to improve our listening skills. Out attitude should be to build people up, so they can honestly feel better for having talked to you.*

*Always be on the look out to do something for others. Keep giving, both in big and little ways. Volunteer your time, to guide others, even if it is one hour per month. Do something for yourself. No matter how busy you are, never ignore yourself. Take time for yourself every day. Enjoy the, simple pleasures of reading a book or watching birds. Indulge yourself in doing something, you have always wanted to do, like watching a movie or roaming in the market. Forgive others as grudges and grievances are unhealthy emotional baggage. Let go of them, so that you can get on, with the main task of your life. Do not be overtly critical of yourselves. Self flagellation is unhealthy and is detrimental. Do the best you can, and then be satisfied that you have done your best. It is very essential to know what is really important, and who matters. Ask yourself whether, the way you are living, your life, is consistent, with what you regard, is important to you. Also ask yourself, whether you are concentrating on, as to what matters most in your life. If you are on the wrong track, then take action to determine how to get from where, you are, to where you want to be. Gift yourself happiness, which is a choice. It is available to everyone, through the right attitude. Take the approach from" achieving to be happy to "happily achieving."*




# ವಾಗ್ವಾದ

ಗೊ.ರು. ಚನ್ನಬಸಪ್ಪ

ಎಲ್ಲೋ ಓದಿದ ಒಂದು ಸ್ವಾರಸ್ಯದ ದೃಷ್ಟಾಂತ : ಒಮ್ಮೆ ಇಬ್ಬರು ವಿದ್ವಾಂಸರು ಒಂದು ನಿಲ್ದಾಣದಲ್ಲಿ ರೈಲುಗಾಡಿ ಹತ್ತಿದರು. ಇಬ್ಬರಿಗೂ ಪರಸ್ಪರ ಪರಿಚಯವಿರಲಿಲ್ಲ. ಅವರಲ್ಲಿ ಒಬ್ಬ ವಿಚಾರವಾದಿ; ಮತ್ತೊಬ್ಬ ಸಂಪ್ರದಾಯವಾದಿ. ಇಬ್ಬರೂ ಒಂದೇ ಬೋಗಿಯ ಒಂದೇ ಕೋಣೆಯಲ್ಲಿ ಕುಳಿತರು. ರೈಲು ಬಂಡಿ ನಿಲ್ದಾಣ ಬಿಟ್ಟು ಹೊರಟು ಸ್ವಲ್ಪ ದೂರ ಸಾಗಿರಬಹುದು. ಸಹಜವಾಗಿ ಕಿಟಕಿಯ ಮೂಲಕ ಗಾಳಿ ನುಗ್ಗತೊಡಗಿತು. ಸಂಪ್ರದಾಯವಾದಿ ವಿದ್ವಾಂಸ ಕಿಟಕಿ ಮುಚ್ಚತೊಡಗಿದ. ಆದರೆ ವಿಚಾರವಾದಿ ವಿದ್ವಾಂಸ ಅದನ್ನು ತಡೆದ.

ಕಿಟಕಿ ಮುಚ್ಚಬೇಕೆಂದು ಒಬ್ಬ, ತೆರಿದಿರಬೇಕೆಂದು ಮತ್ತೊಬ್ಬ. ಇಬ್ಬರಿಗೂ ವಾಗ್ವಾದ ಆರಂಭವಾಗಿ ಅದು ತಾರಕಕ್ಕೇರಿತು. ಇಬ್ಬರೂ ತಮ್ಮ ತಮ್ಮ ವಾದವನ್ನು ಸಾಧಾರವಾಗೇ ಮುಂದಿಡುತ್ತಿದ್ದರು. ಹಾಗೆಯೇ ಕೋಪದ ತಾಪಕ್ಕೆ ಸಿಕ್ಕಿ ಸಮತೋಲನವನ್ನೇ ಕಳೆದುಕೊಂಡಿದ್ದರು.

'ತೆರೆದ ಕಿಟಕಿಯಿಂದ ಗಾಳಿ ನುಗ್ಗಿ ನನಗೆ ಶೀತವುಂಟಾಗಿ ನೆಗಡಿಜ್ವರ ಬಂದು ನಾನು ಸತ್ತು ಹೋದರೆ ನೀನು ಜವಾಬ್ದಾರನಾಗುವೆಯಾ?' ಎಂಬುದು ಸಂಪ್ರದಾಯವಾದಿ ವಿದ್ವಾಂಸನ ವಾದ. 'ಕಿಟಕಿ ಮುಚ್ಚಿ ಗಾಳಿ ಬರುವುದು ನಿಂತು ಉಸಿರುಕಟ್ಟಿ ನಾನು ಸತ್ತು ಹೋದರೆ ನೀನು ಜವಾಬ್ದಾರನಾಗುವಿಯಾ?' ಎಂಬುದು ವಿಚಾರವಾದಿ ವಿದ್ವಾಂಸನ ವಾದ. ಇಬ್ಬರ ವಾದಗಳಲ್ಲೂ ಸತ್ಯವಿತ್ತು. ಆದರೆ ಸಮಾಧಾನವಿರಲಿಲ್ಲ.

ಅಷ್ಟರಲ್ಲಿ ಅಕ್ಕ ಪಕ್ಕದ ಕೆಲವು ಗದ್ದಲಾಸಕ್ತರು ಅವರಿಬ್ಬರು ಜಗಳದಲ್ಲಿ ಸೇರಿಕೊಂಡು ಪರ-ವಿರೋಧ ವಹಿಸಿದರು. ಗದ್ದಲ ಹೆಚ್ಚಾಯಿತೇ ವಿನಃ ಅವರಿಬ್ಬರಲ್ಲಿ ಯಾರೂ ಸೋಲುವಂತೆ ಕಾಣಲಿಲ್ಲ. ಈ ಗದ್ದಲ ಕೇಳಿ ಟಿಕೆಟ್ ಪರೀಕ್ಷಕನೂ ಅಲ್ಲಿಗೆ ಬಂದ. ಆದರೆ ಅವರಿಬ್ಬರನ್ನು ಹೇಗೆ ಸಮಾಧಾನಗೊಳಿಸುವುದೆಂಬುದು ಅವನಿಗೂ ಕಷ್ಟವಾಯಿತು.

ವಿದ್ವಾಂಸರ ವಾಗ್ಯುದ್ಧ ನಡದೇ ಇತ್ತು. ಯುದ್ಧವಿರಾಮ ನೋಡಿಕೊಂಡು ಅಲ್ಲಿದ್ದ ಒಬ್ಬ ಜಾಣ ಪ್ರಯಾಣಿಕ ಒಂದು ಪರಿಹಾರ ಸೂತ್ರ ಹೇಳಿದ. ಟಿಕೆಟ್ ಪರೀಕ್ಷಕನನ್ನು ಕುರಿತು 'ಮೊದಲು ಕಿಟಕಿಯನ್ನು ತೆರೆದುಬಿಡಿ, ಗಾಳಿ ನುಗ್ಗಿ ಶೀತವಾಗಿ ಜ್ವರಬಂದು ಒಬ್ಬ ಸಾಯುತ್ತಾನೆ. ನಂತರ ಕಿಟಕಿ ಮುಚ್ಚಿಬಿಡಿ. ಗಾಳಿ ಬಾರದೆ ಉಸಿರುಕಟ್ಟಿ ಇನ್ನೊಬ್ಬ ಸಾಯುತ್ತಾನೆ. ನಂತರ ನಾವಾದರೂ ನೆಮ್ಮದಿಯಿಂದ ಪ್ರಯಾಣ ಮಾಡಬಹುದು, ಎಂದ. ಸ್ವಾರಸ್ಯದ ಸೂತ್ರ ಕೇಳಿ ಅಲ್ಲಿ ನೆರೆದಿದ್ದ ಎಲ್ಲರೂ ನಕ್ಕರು. ಈ ಮಾತು ಕೇಳುತ್ತಿದ್ದಂತೆ ಅರ್ಧ ತೆರೆದು, ಅರ್ಧ ಮುಚ್ಚಿಟ್ಟ ಕಿಟಕಿಯನ್ನು ಅಷ್ಟಕ್ಕೇ ಬಿಟ್ಟು ಆ ವಾಗ್ವಾದಿಗಳು ತೆಪ್ಪಗೆ ಕುಳಿತು ಪ್ರಯಾಣ ಮಾಡಿದರಂತೆ!

ಈ ಲೋಕ ಜೀವನವೇ ಹೀಗೆ. ಒಬ್ಬರಿಗೆ ಬೇಕಾಗುವುದು, ಇನ್ನೊಬ್ಬರಿಗೆ ಬೇಡವಾಗಿರುತ್ತದೆ. ಅದಕ್ಕಾಗಿ ವಾದ-ವಿವಾದ. ತಮಗಷ್ಟೇ ಅಲ್ಲದೆ ಅಕ್ಕ ಪಕ್ಕದವರ ನೆಮ್ಮದಿಗೂ ಭಂಗ.

ಈ ರೈಲು ಪ್ರಯಾಣಿಕ ವಿದ್ವಾಂಸರ ನಿಲುವು ಏನೇ ಇದ್ದರೂ ಇಲ್ಲಿ ನಾವು ವಿಚಾರಮಾಡಬೇಕಾದ ಎರಡು ಗಂಭೀರ ಅಂಶಗಳಿವೆ. ಕಿಟಕಿ ಮುಚ್ಚಬೇಕೆಂದ ವಿದ್ವಾಂಸ ಸಂಪ್ರದಾಯವಾದಿ. ಅವನಿಗೆ ಹೊಸಗಾಳಿ, ಹೊರಗಿನ ಗಾಳಿ ಹಿಡಿಸದು.

ತಾನಿರುವ ಹಳೆಗಾಳಿಯ ವಾತಾವರಣದಿಂದಲೇ ಅವನಿಗೆ ತೃಪ್ತಿ. ಅವನ ಸಂಕುಚಿತ ದೃಷ್ಟಿ ಅವನಿಂದ ಎಂತಹ ದಡ್ಡ ಮಾತನ್ನು ಆಡಿಸುತ್ತದೆ : ನೋಡಿ. 'ಒಂದು ವೇಳೆ ನಾನು ಸತ್ತರೆ ನೀನು ಜವಾಬ್ದಾರನಾಗುವೆಯಾ?' ಎಂದು ಕೇಳುತ್ತಾನೆ. ಅವನು ಸತ್ತಮೇಲೆ ಯಾರು ಜವಾಬ್ದಾರರಾದರೇನು? ಆದರೆ ವಿವೇಕ ಕಳೆದುಕೊಂಡ ಅವನ ನಿಲುವಿನ ಪಟ್ಟು ಅಂತಹುದು; ಸಿಟ್ಟು ಅಂತಹುದು.

ಹೀಗೆ ಹಳೆಯ ವಿಚಾರಗಳನ್ನು ತಲೆಯಲ್ಲಿ ತುಂಬಿಟ್ಟುಕೊಂಡವರು ಹೊಸ ವಿಚಾರಗಳನ್ನು ಸ್ವೀಕರಿಸಲು ಸಿದ್ಧರಿರುವುದಿಲ್ಲ. ಅವರದು ಒಂದು ರೀತಿಯಲ್ಲಿ ಕತ್ತಲ ಕೋಣೆಯ ಬದುಕು. ಸುತ್ತ ಆಗುತ್ತಿರುವ ಬದಲಾವಣೆಗಳನ್ನು ಅವರು ಲಕ್ಷಿಸುವುದಿಲ್ಲ. ಅಪ್ಪ ಹಾಕಿದ ಆಲದ ಗಿಡ ಮುಪ್ಪು ಬಂದು ಉರುಳಿ ಬೀಳುವಂತಿದ್ದರೂ ಅದರಡಿಯೇ ಇರಬೇಕೆನ್ನುತ್ತಾರೆ. ಕಾಲದ ಅಗತ್ಯ ಅವರಿಗೆ ಅರ್ಥವಾಗುವುದೇ ಇಲ್ಲ. ತಾವು ಬಿಟ್ಟ ಕೆಟ್ಟ ಗಾಳಿ ಹೊರಗೆ ಹೋಗಿ ಹೊರಗಿನಿಂದ ಹೊಸ ಗಾಳಿ ಬರಬೇಕೆಂಬ ಸಾಮಾನ್ಯ ಜ್ಞಾನವೂ ಅಂತಹ ಸಂಪ್ರದಾಯವಾದಿಗಳಿಗೆ ಇರುವುದಿಲ್ಲ. ತಾವಾಯಿತು, ತಮ್ಮ ಜಗತ್ತಾಯಿತು. ಹಾಗಾಗಿ 'ಕಿಟಕಿ ಮುಚ್ಚಿ' ಎಂದು ಹಠ ಮಾಡುತ್ತಾರೆ; ಜೊತೆಯ ಪ್ರಯಾಣಿಕರಿಗೂ ಉಸಿರು ಕಟ್ಟಿಸುತ್ತಾರೆ.

ಆದೇ ಕಿಟಕಿ ತೆರೆಯಬೇಕೆಂದ ವಿಚಾರವಾದಿ ಸದಾ ಹೊಸ ಗಾಳಿಯನ್ನು ಬಯಸುತ್ತಾನೆ. ಸಂಪ್ರದಾಯವಾದಿಯಂತೆ ಅವನದು ಕತ್ತಲೆಯಿಂದಲೇ ತೃಪ್ತಿಪಡುವ ಜಾಯಮಾನವಲ್ಲ. ಅಂತೇ ಕಿಟಕಿ ಮುಚ್ಚಲು ಹೇಳಿದವನನ್ನು ಅಣಕಿಸಲು 'ಒಳಗಿನ ಗಾಳಿ ಹೊರಗೆ ಹೋಗದೆ ಉಸಿರುಕಟ್ಟಿ ಸತ್ತರೆ ನೀನು ಜವಾಬ್ದಾರನಾಗುವೆಯಾ?' ಎಂದು ತಿರುಗುಬಾಣ ಬಿಡುತ್ತಾನೆ.

ಇವರಿಬ್ಬರ ವಾಗ್ವಾದ ಏನೇ ಇದ್ದರೂ, ಅವರ ಹಠದಿಂದಾಗಿ ಸಹ-ಪ್ರಯಾಣಿಕರ ನೆಮ್ಮದಿ ಹಾಳಾಗಬಾರದಷ್ಟೆ. ಅದಕ್ಕೇ ಆ ಜಾಣ ಪ್ರಯಾಣಿಕ ಸ್ವಾರಸ್ಯದ ಪರಿಹಾರಸೂತ್ರ ಸೂಚಿಸಿದ್ದು.

ಸಂಪ್ರದಾಯವಾದಿಯಿರಲಿ, ವಿಚಾರವಾದಿಯಿರಲಿ ಹಠ ಸಲ್ಲದು. ಅವರ ಹಠಕ್ಕೆ ಬೇಸತ್ತೇ ಆ ಮೂರನೆಯ ಪ್ರಯಾಣಿಕ ಇಬ್ಬರೂ ಸಾಯಲಿ ಎಂದದ್ದು. ಅವರು ಸಾಯಬೇಕೆಂಬುದು ಅವನ ಉದ್ದೇಶವಾಗಿರಲಿಲ್ಲ. ಸುಮ್ಮನಿರಬೇಕೆಂದು ಹೇಳಿದ್ದ. ಅವನ ಮಾತಿನಿಂದ ಆ ಇಬ್ಬರು ವಿದ್ವಾಂಸರು ಸುಮ್ಮನಾದದ್ದೂ ನಿಜ; ಉಳಿದ ಪ್ರಯಾಣಿಕರು ನೆಮ್ಮದಿಗೊಂಡಿದ್ದೂ ನಿಜ.

+

ಸಂತಸದ ಸುದ್ದಿ

## *ದಳ ನಾಯಕ-ನಾಯಕಿಯರೇ, ಸ್ಕೌಟ್‌ಗಳೇ ನಿಮಗೊಂದು ಸಂತಸದ ಸುದ್ದಿ*

ಅನೇಕ ದಿನಗಳಿಂದ ನಿರೀಕ್ಷಿಸುತ್ತಿದ್ದ 'ಬಾಲಕರಿಗಾಗಿ ಸ್ಕೌಟಿಂಗ್' ಪುಸ್ತಕ ಪುನರ್ ಮುದ್ರಣಗೊಂಡು ಇನ್ನು ಕೇಲವೇ ದಿನಗಳಲ್ಲಿ ರಾಜ್ಯ ಮಾರಾಟ ಮಳಿಗೆಯಲ್ಲಿ ಮಾರಾಟಕ್ಕೆ ದೊರೆಯಲಿದೆ. ಈ ಪುಸ್ತಕದ ಮುದ್ರಣಕ್ಕೆ ಶ್ರೀ ಎನ್. ಶ್ರೀನಿವಾಸನ್ ಹಾಗೂ ಶ್ರೀ ಆರ್. ಚಂದ್ರಶೇಖರನ್ ಅವರುಗಳು ತಮ್ಮ ಪೂಜ್ಯ ತಂದೆಯವರ ನೆನೆಪಿನಲ್ಲಿ ತಲಾ ರೂ. 10,000=00ಗಳನ್ನು ದೇಣಿಗೆಯಾಗಿ ನೀಡಿರುವುದರಿಂದ ಪುಸ್ತಕದ ಬೆಲೆ ಕೇವಲ ರೂ. 70/- ಆಗಿರುತ್ತದೆ. ಇದು ಸ್ಕೌಟಿಂಗ್ ಶತಮಾನೋತ್ಸವದ ಸಂದರ್ಭದ ಕೊಡುಗೆ ಆಗಿದೆ. ಈ ಕಡಿತಗೊಳಿಸಿದ ಬೆಲೆಯು ಪ್ರಥಮ 1,000 ಪ್ರತಿಗಳಿಗೆ ಮಾತ್ರ ಅನ್ವಯಿಸುತ್ತದೆ. ಈ ಸದವಕಾಶವನ್ನು ಬಳಸಿಕೊಳ್ಳಿ. *– ಸಂಪಾದಕ*





ವಿಶ್ವ ಸ್ಕೌಟ್ ಶತಮಾನೋತ್ಸವದ ಆಚರಣೆ ಪ್ರಯುಕ್ತ
ದಿನಾಂಕ 12 ರಿಂದ 14ರ ಜನವರಿ 2008ವರೆಗೆ ಶಿವಮೊಗ್ಗ ಜಿಲ್ಲಾ ಸಂಸ್ಥೆ ಏರ್ಪಡಿಸಿದ್ದ
ಜಿಲ್ಲಾ ಮಟ್ಟದ ಕಬ್-ಬುಲ್‌ಬುಲ್ ಮತ್ತು ಸ್ಕೌಟ್-ಗೈಡ್ ಕ್ಯಾಂಪೂರಿಯ

# ವಿಹಂಗಮ ನೋಟ









ದಿನಾಂಕ 15–12–2007 ರಂದು ಬೆಂಗಳೂರು ಉತ್ತರ ಜಿಲ್ಲೆ ಯಲಹಂಕ ಸ್ಥಳೀಯ ಸಂಸ್ಥೆ ಏರ್ಪಡಿಸಿದ ವಿಶ್ವ ಸ್ಕೌಟ್ ಶತಮಾನೋತ್ಸವ ಆಚರಣೆ ಸಂದರ್ಭದಲ್ಲಿ ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ನೆನಪಿನ ಸಂಚಿಕೆ ಬಿಡುಗಡೆ ಮಾಡಿದರು. ರಾಜ್ಯ, ಜಿಲ್ಲೆ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.

ಹಿರಿಯ ಸ್ಕೌಟರ್ ಲೆಫ್ಟಿನೆಂಟ್ ಕರ್ನಲ್ ಶ್ರೀ ಹರಿದೇವ್ ವಿ. ಕಾತ್ಕರ್‌ರವರನ್ನು ಶ್ರೀ ರಾಮ್‌ಸಿಂಗ್ ಸನ್ಮಾನಿಸುತ್ತಿರುವುದು. ಸಹಾಯಕ ರಾಜ್ಯ ಆಯುಕ್ತರುಗಳಾದ ಶ್ರೀ ಎನ್. ಚಂದ್ರಶೇಖರ್ ಹಾಗೂ ಶ್ರೀ ಟಿ.ಎಸ್. ಲೋಕಾಸ್ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.





ಕೊಪ್ಪಳ ಜಿಲ್ಲೆ ಗಂಗಾವತಿ ಸ್ಥಳೀಯ ಸಂಸ್ಥೆಯ ವತಿಯಿಂದ ವಿಶ್ವಸ್ಕೌಟ್ ಶತಮಾನೋತ್ಸವ ಹಾಗೂ ನೂತನವಾಗಿ ಪ್ರಾರಂಭವಾದ ಶ್ರೀ ಚನ್ನಬಸವಸ್ವಾಮಿ ರೋವರ್ "ಕ್ರ್ಯೂ" ಉದ್ಘಾಟನೆಯನ್ನು ಜಿಲ್ಲಾ ಆಯುಕ್ತರುಗಳಾದ ಶ್ರೀ ಹೆಚ್.ಎಂ. ಸಿದ್ಧರಾಮಸ್ವಾಮಿ ಹಾಗೂ ಶ್ರೀಮತಿ ಹೇಮಲತ ವಸ್ತ್ರದ್ ನೆರವೇರಿಸಿದರು. ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆಯ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.

ದಿನಾಂಕ 19–12–2007 ರಂದು ಬೆಂಗಳೂರು ಉತ್ತರ ಜಿಲ್ಲೆಯ ಶಿವಾಜಿನಗರ ಸ್ಥಳೀಯ ಸಂಸ್ಥೆ ಆಶ್ರಯದಲ್ಲಿ ವಿಶ್ವಸ್ಕೌಟ್ ಶತಮಾನೋತ್ಸವದ ಅಂಗವಾಗಿ ಏರ್ಪಡಿಸಿದ್ದ ಸಮಾರಂಭದಲ್ಲಿ ಮಾನ್ಯ ರಾಜ್ಯಸಭಾ ಸದಸ್ಯರಾದ ಶ್ರೀಮತಿ ಪ್ರೇಮಕಾರಿಯಪ್ಪನವರನ್ನು ಸನ್ಮಾನಿಸಲಾಯಿತು. ರಾಜ್ಯ, ಜಿಲ್ಲೆ, ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.






ಉತ್ತರ ಕನ್ನಡ ಜಿಲ್ಲೆಯ ಮಾರ್ಥೋಮಾ ಶಾಲೆಯ ಸ್ಕೌಟ್ಸ್‌ಗಳು ವಾರ್ಷಿಕ ಶಿಬಿರದಲ್ಲಿ ಸಮುದ್ರ ತೀರದಲ್ಲಿ ಪಾಲ್ಗೊಂಡಿರುವುದು.



ದಿ 15–12–2007 ರಿಂದ 17–12–2007ರವರೆಗೆ ಬೆಳಗಾವಿ ಜಿಲ್ಲೆ ರಾಮದುರ್ಗ ನಡೆದ ಜಿಲ್ಲಾ ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ಮೇಳವನ್ನು ಪೂಜ್ಯ ಶ್ರೀಶ್ರೀ ಅಭಿನವ ಸಿದ್ದಲಿಂಗ ಶಿವಾಚಾರ್ಯ ಮಹಾಸ್ವಾಮಿಗಳ ಸಾನ್ನಿಧ್ಯದಲ್ಲಿ ಉದ್ಘಾಟಿಸಲಾಯಿತು.

ವಿಶ್ವಸ್ಕೌಟ್ ಶತಮಾನೋತ್ಸವದ ಅಂಗವಾಗಿ ರಾಮದುರ್ಗದಲ್ಲಿ ದಿನಾಂಕ 16–12–2007ರಂದು ನಡೆದ ಸ್ಕೌಟ್ಸ್ ಮತ್ತು ಗೈಡ್ಸ್ ಮೇಳದ ಅಂಗವಾಗಿ ನಡೆದ ಪಥಸಂಚಲನದಲ್ಲಿ ಭಾಗವಹಿಸಿದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಬ್ಯಾಂಡ್‌ನೊಂದಿಗೆ ಸಾಗುತ್ತಿರುವ ವಿಹಂಗಮ ನೋಟ.





ಬೆಳಗಾವಿ ಜಿಲ್ಲೆ ರಾಮದುರ್ಗದಲ್ಲಿ ದಿನಾಂಕ 16–12–2007 ರಂದು ನಡೆದ ಜಿಲ್ಲಾ ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಮೇಳದ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ. ವಿ.ಎನ್. ಗೋಡಖಂಡಿ ವಹಿಸಿದ್ದರು. ಶ್ರೀ ಶ್ರೀ ವೀರಭದ್ರ ಶಿವಯೋಗಿ ಶಿವಾಚಾರ್ಯ ಸ್ವಾಮಿಗಳು ಸಾನಿಧ್ಯವಹಿಸಿದ್ದರು. ಜಿಲ್ಲಾ ಹಾಗೂ ಸ್ಥಳೀಯ ಸಂಸ್ಥೆ ಪದಾಧಿಕಾರಿಗಳು ಉಪಸ್ಥಿತರಿದ್ದರು.

ದಿ 12–01–2008ರಂದು ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರಿನಲ್ಲಿ ನಡೆದ ವೃಕ್ಷಮಣಿಧಾರಕರ ಸಮಾವೇಶದಲ್ಲಿ ಶ್ರೀ ಜಿ.ಕೆ. ಭಟ್ಟ, LT(S) ಮಾತನಾಡುತ್ತಿರುವುದು. ಸಾರ್ವಜನಿಕ ಶಿಕ್ಷಣ ಇಲಾಖೆಯ ಉಪನಿರ್ದೇಶಕರಾದ ಶ್ರೀಮತಿ ಫಿಲೋಮಿನ ಲೋಬೋರವರು ಮುಖ್ಯ ಅತಿಥಿಗಳಾಗಿದ್ದರು.






ದಿ 11–01–2008ರಿಂದ 13–01–2008ರವರೆಗೆ ದಕ್ಷಿಣ ಕನ್ನಡ ಜಿಲ್ಲೆ ಪಿಲಿಕುಳ ನಡೆದ ರೋವರ್ ರೇಂಜರ್ ಸಮಾಗಮಾದಲ್ಲಿ ಚಟುವಟಿಕೆಯಲ್ಲಿ ಪಾಲ್ಗೊಂಡ ರೋವರ್‌ಗಳು.



ದಿನಾಂಕ 30–12–2007 ರಂದು ಶ್ರೀ ಚಾಮುಂಡಿ ಸ್ಕೌಟ್ ತಂಡದ 89ನೇ ವಾರ್ಷಿಕೋತ್ಸವದಂದು ಹಿರಿಯ ಸ್ಕೌಟ್‌ರ್ ಮತ್ತು ಜಯಾ ಸ್ಕೌಟ್ ತಂಡದ ಸದಸ್ಯರಾದ ಶ್ರೀ ಎಮ್.ಜಿ. ರಾಮಮೂರ್ತಿಯವರನ್ನುರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪನವರು ಸನ್ಮಾನಿಸಿದರು ಹಾಗೂ ಅದೇ ದಿನ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಲಾಂಛನವನ್ನು ಅನಾವರಣಗೊಳಿಸಲಾಯಿತು. ಶ್ರೀ ಹರಿದೇವ್ ಕಾತ್ಕರ್, ಶ್ರೀಮತಿ ರಾಮಲತ, ಶ್ರೀ ಕೆ. ನರಸಿಂಹಮೂರ್ತಿ, ಶ್ರೀಮತಿ ಗೀತಾ ನಟರಾಜ್, ಶ್ರೀ ಗಿರಿರಾಜ್, ಉಪಾಧ್ಯಕ್ಷರು, ಶ್ರೀ ಚಾಮುಂಡಿ ಸ್ಕೌಟ್ ಟ್ರಸ್ಟ್ ಇವರನ್ನು ಚಿತ್ರದಲ್ಲಿ ಕಾಣಬಹುದು.



ದಿ 12–01–2008ರಂದು ರಾಜ್ಯ ಕೇಂದ್ರ ಕಛೇರಿವತಿಯಿಂದ ಹಮ್ಮಿಕೊಳ್ಳಲಾಗಿದ್ದ ರಾಷ್ಟ್ರೀಯ ಯುವದಿನಾಚರಣೆ ಹಾಗೂ ಸ್ವಾಮಿ ವಿವೇಕಾನಂದರ ಜನ್ಮದಿನಾಚರಣೆ ಪ್ರಯುಕ್ತ ಜವಾಹರ್ ಬಾಲಭವನದಲ್ಲಿ ಶ್ರೀ ಚಾಮುಂಡಿ ಸ್ಕೌಟ್ ತಂಡದವರು ಪ್ರಸ್ತುತ ಪಡಿಸಿದ ಒನಕೆ ಓಬವ್ವ ರೂಪಕದ ಒಂದು ದೃಶ್ಯ.




ಶಿವಮೊಗ್ಗ ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಟಿ.ವಿ. ನಾರಾಯಣ ಶಾಸ್ತ್ರಿಯವರು, ಜಯಪ್ರಕಾಶ ನಾರಾಯಣ ಪದವಿ ಪೂರ್ವ ಕಾಲೇಜ್ ಸ್ಕೌಟ್ ವಿದ್ಯಾರ್ಥಿಗಳಿಗೆ ಉಚಿತ ಸಮವಸ್ತ್ರ ವಿತರಿಸುತ್ತಿರುವುದು. ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



ಹಾಸನ ಜಿಲ್ಲೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಮುದಾಯ ಭವನದ ಉದ್ಘಾಟನೆಯ ಸಂದರ್ಭದಲ್ಲಿ ಕುಮಾರಿ ವೈ.ವಿ. ಗಾನವಿ ಅವರು ಧೂಪಾರತಿ ಸ್ವಾಗತ ನೃತ್ಯದೊಂದಿಗೆ ಗೌರವಾನ್ವಿತ ಅತಿಥಿಗಳನ್ನು ಸ್ವಾಗತಿಸಿದರು.




## ಆಯುಕ್ತರುಗಳ ಮತ್ತು ಕಾರ್ಯದರ್ಶಿಗಳ ರಾಜ್ಯ ಮಟ್ಟದ ಸಮಾವೇಶ

ದಿನಾಂಕ 11-01-2008ರಂದು ಮೇಲ್ಕಂಡ ಸಮಾವೇಶವು ರಾಜ್ಯ ಕೇಂದ್ರ ಕಛೇರಿಯಲ್ಲಿ ಜರುಗಿತು. ರಾಜ್ಯದ ವಿವಿಧ ಜಿಲ್ಲೆಗಳಿಂದ ಆಗಮಿಸಿದ್ದ ಜಿಲ್ಲಾ ಮುಖ್ಯ ಆಯುಕ್ತರುಗಳು, ಜಿಲ್ಲಾ ಆಯುಕ್ತರುಗಳು ಮತ್ತು ಕಾರ್ಯದರ್ಶಿಗಳು ಈ ಸಮಾವೇಶದಲ್ಲಿ ಪಾಲ್ಗೊಂಡಿದ್ದರು. ಸಹಾಯಕ ರಾಜ್ಯ ಆಯುಕ್ತರುಗಳು ಮತ್ತು ಕೇಂದ್ರ ಸ್ಥಾನಿಕ ಆಯುಕ್ತರುಗಳೂ ಸಹ ಇದರಲ್ಲಿ ಭಾಗವಹಿಸಿದ್ದರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಆಯುಕ್ತ (ಸ್ಕೌಟ್) ಶ್ರೀ ಸಿ.ಆರ್. ಮೊಹಮ್ಮದ್ ಜಹಿರುದ್ದೀನ್, ರಾಜ್ಯ ಆಯುಕ್ತೆ (ಗೈ) ಶ್ರೀಮತಿ ರತ್ನ ವಿ. ಕುಶನೂರ್ ಮತ್ತು ರಾಜ್ಯ ಪದಾಧಿಕಾರಿಗಳು ಈ ಸಮಾವೇಶದಲ್ಲಿ ಭಾಗವಹಿಸಿದ್ದರು.

ರಾಜ್ಯದ ತರಬೇತಿ ಹಾಗೂ ಕಾರ್ಯಕ್ರಮಗಳು ಜಿಲ್ಲೆಗಳ ಪ್ರಗತಿ ಹಾಗೂ ಯೋಜನೆಗಳು ಇವೇ ಮುಂತಾದ ವಿಷಯಗಳ ಬಗ್ಗೆ ಚರ್ಚಿಸಲಾಯಿತು.

## ರಾಷ್ಟ್ರೀಯ ಯುವ ದಿನಾಚರಣೆ ಹಾಗೂ ಶ್ರೀ ಸ್ವಾಮಿ ವಿವೇಕಾನಂದರ ಜನ್ಮ ದಿನಾಚರಣೆ

ದಿನಾಂಕ 12-01-2008ರಂದು ರಾಷ್ಟ್ರೀಯ ಯುವ ದಿನಾಚರಣೆ ಹಾಗೂ ಸ್ವಾಮಿ ವಿವೇಕಾನಂದರ ಜನ್ಮ ದಿನಾಚರಣೆಯನ್ನು ಅತ್ಯಂತ ಸಂಭ್ರಮ ಮತ್ತು ಸಡಗರಗಳಿಂದ ಆಚರಿಸಲಾಯಿತು. ಇದರ ಅಂಗವಾಗಿ ಹಮ್ಮಿಕೊಳ್ಳಲಾಗಿದ್ದ ಪಥಚಲನವನ್ನು ಘನತೆವೆತ್ತ ರಾಜ್ಯಪಾಲರಾದ ಶ್ರೀ ರಾಮೇಶ್ವರ ಠಾಕೂರ್‌ರವರು ವಿಧಾನ ಸೌಧದ ಮುಂಭಾಗದಲ್ಲಿ ಬೆಳಗ್ಗೆ 10 ಗಂಟೆಗೆ ಉದ್ಘಾಟಿಸಿದರು. ರಾಜ್ಯಪಾಲರ ಸಲಹೆಗಾರರಾದ ಶ್ರೀ ಪಿ.ಕೆ.ಹೆಚ್. ತಾರಕನ್, ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಪದಾಧಿಕಾರಿಗಳು, ಸ್ಕೌಟ್-ಗೈಡ್‌ಗಳು, ದಳನಾಯಕರುಗಳು, ಈ ಸಮಾರಂಭದಲ್ಲಿ ಭಾಗವಹಿಸಿದ್ದರು. ಸ್ವಾಮಿ ವಿವೇಕಾನಂದರ ಭಾವಚಿತ್ರ ಮತ್ತು ಘೋಷಣಾ ಫಲಕಗಳೊಂದಿಗೆ ಮೆರವಣಿಗೆಯಲ್ಲಿ ಸಾಗಿದ ಸ್ಕೌಟ್-ಗೈಡ್‌ಗಳು ಕಬ್ಬನ್ ಪಾರ್ಕಿನ ಬಾಲಭವನ ತಲುಪಿದರು.

ನಂತರ ಪ್ರಬಂಧ ಸ್ಪರ್ಧೆ, ಭಾಷಣ ಸ್ಪರ್ಧೆ ಮತ್ತು ರಸಪ್ರಶ್ನೆ ಮುಂತಾದ ಸ್ಪರ್ಧೆಗಳನ್ನು ನಡೆಸಲಾಯಿತು. ಮಧ್ಯಾಹ್ನ 2.30ಕ್ಕೆ ನಡೆದ ಸಮಾರೋಪ ಸಮಾರಂಭದಲ್ಲಿ ಯುವಜನ ಸೇವೆ ಮತ್ತು ಕ್ರೀಡಾ ಇಲಾಖೆಯ ಆಯುಕ್ತರಾದ ಶ್ರೀ ಅಮರ್ ಕುಮಾರ್ ಪಾಂಡೆ, ಐ.ಪಿ.ಎಸ್.ರವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿ ಸ್ವಾಮಿ ವಿವೇಕಾನಂದರ ಆದರ್ಶಗಳನ್ನು ಪಾಲಿಸಲು ಕರೆಯಿತ್ತರು. ರಾಜ್ಯ ಮುಖ್ಯ ಆಯುಕ್ತರಾದ ಶ್ರೀ ಕೊಂಡಜ್ಜಿ ಬ. ಷಣ್ಮುಖಪ್ಪ, ರಾಜ್ಯ ಪದಾಧಿಕಾರಿಗಳು, ದಳನಾಯಕರುಗಳು ಈ ಸಂದರ್ಭದಲ್ಲಿ ಉಪಸ್ಥಿತರಿದ್ದರು. ಸ್ಪರ್ಧೆಯಲ್ಲಿ ವಿಜೇತರಾದವರಿಗೆ ಬಹುಮಾನಗಳನ್ನು ನೀಡಲಾಯಿತು. ಶ್ರೀ ಚಾಮುಂಡಿ ಸ್ಕೌಟ್ ತಂಡ ಮತ್ತು ಸ್ವರ್ಗರಾಣಿ ಪ್ರೌಢಶಾಲೆಯ ಮಕ್ಕಳಿಂದ ಸಾಂಸ್ಕೃತಿಕ ಪ್ರದರ್ಶನ ನಡೆಯಿತು.

ಬೆಂಗಳೂರು ಉತ್ತರ ಮತ್ತು ದಕ್ಷಿಣ ಜಿಲ್ಲೆಗಳಿಂದ ಸುಮಾರು 2,000 ಸ್ಕೌಟ್-ಗೈಡ್‌ಗಳು ಇದರಲ್ಲಿ ಪಾಲ್ಗೊಂಡಿದ್ದರು.



# ಜಿಲ್ಲಾ ವಾರ್ತೆ

## ಬೆಂಗಳೂರು ಉತ್ತರ ಜಿಲ್ಲೆ

ಬಾಣಸವಾಡಿ ಸ್ಥಳೀಯ ಸಂಸ್ಥೆ ವತಿಯಿಂದ ದಿನಾಂಕ 22-12-2007 ಮತ್ತು 23-12-2007 ರಂದು ಮಾರುತಿ ವಿದ್ಯಾಲಯ, ಬಾಬುಸಾಬಪಾಳ್ಯ ಆಶ್ರಯದಲ್ಲಿ "ಬ್ಯಾಡ್ಜ್ ವರ್ಕ್ ಕ್ಯಾಂಪ್" ನಡೆಯಿತು. ಮಾರುತಿ ವಿದ್ಯಾಲಯ, ಎಸ್.ಜೆ.ಆರ್.ಸಿ. ಎಂ.ಎಂ.ಇ.ಟಿ., ಮ್ಯಾಕ್ಸ್‌ವೆಲ್, ಚಿನ್ಮಯ ಪ್ರೌಢ ಶಾಲೆಗಳಿಂದ ಒಟ್ಟು 188 ವಿದ್ಯಾರ್ಥಿಗಳು ಭಾಗವಹಿಸಿ ಶಿಬಿರದ ಪ್ರಯೋಜನ ಪಡೆದುಕೊಂಡರು. ಶಿಬಿರದ ನಾಯಕರಾಗಿ ಶ್ರೀ ಕೆ. ವರ್ಧಮಾನ್ ಮತ್ತು ಶ್ರೀಮತಿ ಜ್ಞಾನೇಶ್ವರಿಯವರು ಕಾರ್ಯನಿರ್ವಹಿಸಿದರು. ರಾತ್ರಿ ನಡೆದ 'ಶಿಬಿರಾಗ್ನಿ' ಕಾರ್ಯಕ್ರಮದಲ್ಲಿ ಶ್ರೀಮತಿ ಮತ್ತು ಶ್ರೀ ಸರೋಜ ಗಣೇಶ್ ದಂಪತಿಗಳು ಭಾಗವಹಿಸಿದ್ದರು.

ಸಮಾರೋಪ ಸಮಾರಂಭದ ಆಧ್ಯಕ್ಷತೆಯನ್ನು ಶ್ರೀ ಭಟ್ಟು ಗಣೇಶ್ ಶರ್ಮ ವಹಿಸಿದ್ದರು. ಮುಖ್ಯ ಅತಿಥಿಗಳಾಗಿ ಶ್ರೀಮತಿ ರಾಮುಲತಾರವರು ಭಾಗವಹಿಸಿದ್ದರು. ಶ್ರೀಮತಿ ಸಂಪತ್ ಕುಮಾರ್, ಶ್ರೀಮತಿ ರಾಜಲಕ್ಷ್ಮೀಯವರು ಸಭೆಯಲ್ಲಿ ಉಪಸ್ಥಿತರಿದ್ದರು.

❀ ❀ ❀ ❀

ದಿನಾಂಕ 15-12-2007 ರಂದು ಯಲಹಂಕದಲ್ಲಿ ಸ್ಕೌಟಿಂಗ್ ಶತಮಾನೋತ್ಸವ ಕಾರ್ಯಕ್ರಮವನ್ನು ಆಚರಿಸಲಾಯಿತು. ಬೆಳಿಗ್ಗೆ 8.30ಕ್ಕೆ ರಾಜ್ಯ ಮುಖ್ಯ ಆಯುಕ್ತರಾದ ಕೊಂಡಜ್ಜಿ ಬ. ಷಣ್ಮುಖಪ್ಪ ಅವರು ಪಥಸಂಚಲನ ಕಾರ್ಯಕ್ರಮದಲ್ಲಿ ಭಾಗವಹಿಸಿ ವಂದನೆ ಸ್ವೀಕರಿಸಿ ಎಲ್ಲರಿಗೂ ಶುಭ ಕೋರಿದರು. ಹಾಗೂ ನೆನಪಿನ ಸಂಚಿಕೆಯನ್ನು ಬಿಡುಗಡೆ ಮಾಡಿದರು. ಶ್ರೀ ಎನ್. ಚಂದ್ರಶೇಖರ್, ಸಹಾಯಕ ಸ್ಕೌಟ್ ಆಯುಕ್ತ (ಎಸ್) ಅವರು ಸ್ಥಳೀಯ ಸಂಸ್ಥೆ ಬಗ್ಗೆ ತಿಳಿಸಿಕೊಟ್ಟರು ಹಾಗೂ ಶುಭ ಕೋರಿದರು.

ಬೆಳಿಗ್ಗೆ 11-00 ಗಂಟೆಗೆ ಶತಮಾನೋತ್ಸವ ಕಾರ್ಯಕ್ರಮದಲ್ಲಿ ಶ್ರೀ ಹರಿದೇವ್ ಕಾಟ್ಕರ್ ಅವರನ್ನು ಸನ್ಮಾನಿಸಲಾಯಿತು. ಈ ಕಾರ್ಯಕ್ರಮಕ್ಕೆ ಆಗಮಿಸಿದ ಎಲ್ಲಾ ಗಣ್ಯ ವ್ಯಕ್ತಿಗಳಿಗೆ ಶತಮಾನೋತ್ಸವದ ನೆನಪಿನ ಕಾಣಿಕೆಗಳನ್ನು ನೀಡಿ ಗೌರವಿಸಲಾಯಿತು. ಈ ಕಾರ್ಯಕ್ರಮದಲ್ಲಿ 175 ಸ್ಕೌಟ್, 175 ಗೈಡ್‌ಗಳು ಹಾಗೂ 25 ದಳ ನಾಯಕರುಗಳು ಭಾಗವಹಿಸಿದ್ದರು.

## ಮೈಸೂರು ಜಿಲ್ಲೆ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಮೈಸೂರು ಜಿಲ್ಲಾ ವತಿಯಿಂದ ದಿನಾಂಕ 30.11.2007ರ ಶುಕ್ರವಾರದಂದು ಕಬ್ಸ್ ಮಕ್ಕಳಿಗಾಗಿ ಚತುರ್ಥಚರಣ್ ಪರೀಕ್ಷಾ ಶಿಬಿರ ಹಾಗೂ ಬುಲ್‌ಬುಲ್ಸ್ ಮಕ್ಕಳಿಗಾಗಿ ಹಿರಖ್‌ಪಂಕ್ ಪರೀಕ್ಷಾ ಶಿಬಿರವನ್ನು ಏರ್ಪಡಿಸಲಾಗಿತ್ತು. ವಿವಿಧ ಶಾಲೆಗಳಿಂದ ಕಬ್ಸ್ ಮಕ್ಕಳು ಒಟ್ಟು 59 ಹಾಗೂ ಬುಲ್‌ಬುಲ್ಸ್‌ನ ಒಟ್ಟು 79 ಮಕ್ಕಳು ಹಾಜರಿದ್ದು ಅವರುಗಳ ಕಬ್ ಮಾಸ್ಟರ್ ಹಾಗೂ ಫ್ಲಾಕ್ ಲೀಡರ್‌ಗಳು ಹಾಜರಿದ್ದರು. ಕಬ್ ವಿಭಾಗದಲ್ಲಿ ಪರೀಕ್ಷಾ ಶಿಬಿರದ ನಾಯಕರಾಗಿ ಶ್ರೀಮತಿ ಅಮೃತಮ್ಮ, ಎ.ಎಲ್.ಟಿ(ಸಿ)ರವರು ಕೆಲಸ ನಿರ್ವಹಿಸಿದರು. ಬುಲ್‌ಬುಲ್ಸ್ ವಿಭಾಗದಲ್ಲಿ ಪರೀಕ್ಷಾ ಶಿಬಿರದ ನಾಯಕರಾಗಿ ಮೈಸೂರು ಗ್ರಾಮಾಂತರ ಜಿಲ್ಲೆಯವರಾದ ಶ್ರೀಮತಿ ಎನ್.ಎಂ. ನಾಗರತ್ನಮ್ಮ, ಎ.ಎಲ್.ಟಿ.(ಸಿ) ಕೆಲಸ ನಿರ್ವಹಿಸಿದರು. ಶಿಬಿರಕ್ಕೆ ಜಿಲ್ಲಾ ಪದಾಧಿಕಾರಿಗಳು ಭೇಟಿ ನೀಡಿ ಶುಭ ಹಾರೈಸಿದರು.

ದಿನಾಂಕ 5-12-2007 ರಿಂದ 7-12-2007ರ ವರೆಗೆ ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಜಿಲ್ಲಾ ಸಂಸ್ಥೆಯ ಆವರಣದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳಿಗೆ ತೃತೀಯ ಸೋಪಾನ ಶಿಬಿರವನ್ನು ಮತ್ತು 5-12-2007 ರಿಂದ 6-12-2007ರ ವರೆಗೆ ಕಬ್ಸ್ ಮತ್ತು ಬುಲ್‌ಬುಲ್ಸ್ ಮಕ್ಕಳಿಗೆ ಎರಡು ದಿನಗಳ ಪದಕ ತರಬೇತಿ ಶಿಬಿರವನ್ನು ಏರ್ಪಡಿಸಲಾಗಿತ್ತು.

ದಿನಾಂಕ 5-12-2007ರ ಬೆಳಿಗ್ಗೆ 10 ಗಂಟೆಗೆ ಶ್ರೀ ಪಿ. ವಿಶ್ವನಾಥ್, ಜಿಲ್ಲಾ ಮುಖ್ಯ ಆಯುಕ್ತರು ಈ ಶಿಬಿರವನ್ನು ಉದ್ಘಾಟನೆ ಮಾಡಿದರು. ಸ್ಥಾನಿಕ ಆಯುಕ್ತರಾದ ಶ್ರೀ ಜಿ.ಎನ್. ಚೆನ್ನಬಸಪ್ಪ, ಮುಖ್ಯ ಅತಿಥಿಗಳ ಭಾಷಣ ಮಾಡಿ ಮಕ್ಕಳಿಗೆ ಶುಭ ಹಾರೈಸಿದರು.

## ಸ್ಕೌಟಿಂಗ್ ನೂರು ವರ್ಷ (1907-2007)

ಇದು ಸ್ಕೌಟಿಂಗ್ ಶತಮಾನೋತ್ಸವ ವರ್ಷ,
ನಮಗೆಲ್ಲರಿಗೂ ತಂದಿದೆ ಬಹಳ ಹರ್ಷ.
ತನ್ನ ನೀತಿ ನಿಯಮಗಳಿಂದಾಗಿದೆ ಇದರ ಉತ್ಕರ್ಷ,
ಬನ್ನಿ ನೀವ್ ಮಾಡಿ ಇದರ ಉದ್ದೇಶಗಳ ಪರಾಮರ್ಶೆ.

ದೇವರಿಗೆ ದೇಶಕ್ಕೆ ಕರ್ತವ್ಯವಂತೆ
ಸಮಾಜ ಸೇವೆಗೆ ಸದಾ ಸಿದ್ಧನಂತೆ,
ಕಿರುಬೆರಳ ಮೇಲೆ ಹೆಬ್ಬೆರಳಂತೆ
ದುರ್ಬಲರ ರಕ್ಷಣೆ ಸಬಲರ ಹೊಣೆಯಂತೆ.

ದಿನಕ್ಕೊಂದು ಒಳ್ಳೆಯ ಕೆಲಸವಂತೆ
ಗುರುಹಿರಿಯರಲಿ ಸದಾ ಭಕ್ತಿಯಂತೆ
ಶಕ್ತಿಗಿಂತ ಯುಕ್ತಿಯಲಿ ನಂಬಿಕೆಯಂತೆ
ವಚನ ಪಾಲನೆಗೆ ತಾವ್ ಬದ್ಧರಂತೆ.

– *ಬಿ ನಾಗರಾಜ್*, ಶಿಕ್ಷಕರು
ಜೆ.ಪಿ.ಎನ್. ಹೈಸ್ಕೂಲ್, ಶಿವಮೊಗ್ಗ

ಶ್ರೀಮತಿ ರಾಜಶ್ರೀ, ಸ್ಥಾನಿಕ ಆಯುಕ್ತರು (ಗೈಡ್ಸ್), ಶ್ರೀಮತಿ ಪ್ರೇಮಕುಮಾರಿ, ಜಂಟಿ ಕಾರ್ಯದರ್ಶಿ ಖಜಾಂಚಿಗಳಾದ ಶ್ರೀ ಉಮೇಶ್ ಹಾಜರಿದ್ದರು.

ವಿವಿಧ ಶಾಲೆಗಳಿಂದ 62 ಸ್ಕೌಟ್ಸ್, 137 ಗೈಡ್ಸ್, 54 ಕಬ್ಸ್ ಮತ್ತು 67 ಬುಲ್‌ಬುಲ್ಸ್ ಒಟ್ಟು 324 ಮಕ್ಕಳು ಹಾಗೂ 25 ನಾಯಕ - ನಾಯಕಿಯರುಗಳು, ಸಹ ನಾಯಕರುಗಳು ಶಿಬಿರದಲ್ಲಿ ಭಾಗವಹಿಸಿದ್ದರು.

ಕಬ್ಸ್ ವಿಭಾಗದ ನಾಯಕಿಯಾಗಿ ಶ್ರೀಮತಿ ರಾಧಮ್ಮ, ಎ.ಎಲ್.ಟಿ.(ಸಿ), ಬುಲ್‌ಬುಲ್ಸ್ ವಿಭಾಗದ ನಾಯಕಿಯಾಗಿ ಶ್ರೀಮತಿ ನಾಗರತ್ನಮ್ಮ, ಎ.ಎಲ್.ಟಿ.(ಬಿ), ಸ್ಕೌಟ್ಸ್ ವಿಭಾಗದ ನಾಯಕರಾಗಿ ಶ್ರೀ ಲಕ್ಷ್ಮೀನಾರಾಯಣ್, ಗೈಡ್ಸ್ ವಿಭಾಗದ ನಾಯಕಿಯಾಗಿ ಶ್ರೀಮತಿ ಸುಜಯ, ಹೆಚ್.ಡಬ್ಲ್ಯೂ.ಬಿ.(ಜಿ) ಕೆಲಸ ನಿರ್ವಹಿಸಿದರು.

ದಿನಾಂಕ 7-12-2007 ರಂದು ಸಂಜೆ 4.30 ಗಂಟೆಗೆ ಹಮ್ಮಿಕೊಂಡಿದ್ದ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ಸಿದ್ದೇಶ್, ಜಿಲ್ಲಾ ಆಯುಕ್ತರು (ಸ್ಕೌಟ್ಸ್)ರವರು ವಹಿಸಿದ್ದರು. ಶ್ರೀಮತಿ ಕಮಲಾರಾಮನ್, ಜಿಲ್ಲಾ ಆಯುಕ್ತರು (ಗೈಡ್ಸ್) ಮತ್ತು ಶ್ರೀ ಜಿ.ಎನ್. ಚೆನ್ನಬಸಪ್ಪ, ಸ್ಥಾನಿಕ ಆಯುಕ್ತರು ಅತಿಥಿ ಭಾಷಣ ಮಾಡಿದರು. ಶ್ರೀಮತಿ ರಾಜಶ್ರೀ, ಸ್ಥಾನಿಕ ಆಯುಕ್ತರು (ಗೈಡ್ಸ್)ರವರು ವಂದನಾರ್ಪಣೆ ಮಾಡಿದರು.

### ಗುಲಬರ್ಗಾ ಜಿಲ್ಲೆ

ಸರಕಾರಿ ಹಿರಿಯ ಪ್ರಾಥಮಿಕ ಶಾಲೆ ಯಡ್ರಾಮಿ. ಜೇವರ್ಗಿ ತಾಲ್ಲೂಕು, ಗುಲಬರ್ಗಾ ಜಿಲ್ಲೆಯಲ್ಲಿ ದಿನಾಂಕ 10-12-2007 ರಿಂದ 19-12-2007ರ ವರೆಗೆ ಕಬ್ಸ್ ಮಾಸ್ಟರ್ ಹಾಗೂ ಸ್ಕೌಟ್ ಮಾಸ್ಟರ್ ಮೂಲ ತರಬೇತಿ ಶಿಬಿರವನ್ನು ಏರ್ಪಡಿಸಲಾಗಿದ್ದು. ಸ್ಕೌಟ್ಸ್ ವಿಭಾಗದಲ್ಲಿ 28 ಮಂದಿ ಅಭ್ಯರ್ಥಿಗಳಿದ್ದು ಶ್ರೀ ಡಿ. ಬಸವರಾಜ,

ಎಲ್.ಟಿ.(ಎಸ್) ಶಿಬಿರದ ನಾಯಕರಾಗಿದ್ದರು. ಕಬ್ಸ್ ವಿಭಾಗಕ್ಕೆ ಶ್ರೀಮತಿ ರಾಧಮ್ಮ, ಎ.ಎಲ್.ಟಿ.(ಸಿ) ನಾಯಕರಾಗಿ ಕಾರ್ಯನಿರ್ವಹಿಸಿದರು. ಒಟ್ಟು 24 ಕಬ್ ಮಾಸ್ಟರ್‌ಗಳು ತರಬೇತಿ ಶಿಬಿರದಲ್ಲಿ ಭಾಗವಹಿಸಿದ್ದರು. ದಿನಾಂಕ 13-12-2007 ರಿಂದ 19-12-2007ರ ವರೆಗೆ ಏರ್ಪಡಿಸಲಾದ ಗೈಡ್ ಕ್ಯಾಪ್ಟನ್‌ಗಳು ಮೂಲ ತರಬೇತಿ ಶಿಬಿರದಲ್ಲಿ 20 ಗೈಡ್ ಕ್ಯಾಪ್ಟನ್‌ಗಳು ತರಬೇತಿ ಪಡೆದರು. ಶ್ರೀಮತಿ ಸುಷ್ಮಾ ಗುಡ್ಡದ್, ಎ.ಎಲ್.ಟಿ(ಜಿ) ಇವರು ನಾಯಕರಾಗಿ ಕಾರ್ಯನಿರ್ವಹಿಸಿದರು. ಫ್ಲಾಕ್ ವಿಭಾಗಕ್ಕೆ ಶ್ರೀಮತಿ ಸಿದ್ಧಮ್ಮ, ಎ.ಎಲ್.ಟಿ.(ಬಿ) ನಾಯಕಿಯಾಗಿದ್ದು 13 ಶಿಬಿರಾರ್ಥಿಗಳು ತರಬೇತಿ ಪಡೆದುಕೊಂಡರು.

ದಿನಾಂಕ 18-12-2007ರಂದು ನಡೆದ ಸಮಾರೋಪ ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಮಾನ್ಯ ಶ್ರೀ ಎನ್.ಬಿ. ಪಾಟೀಲ, ಜಿಲ್ಲಾ ಮುಖ್ಯ ಆಯುಕ್ತರು ಹಾಗೂ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ಗುಲಬರ್ಗಾ, ಶ್ರೀ ಎಸ್.ಪಿ. ಸುಳ್ಳದ್, ಜಿಲ್ಲಾ ಆಯುಕ್ತರು (ಸ್ಕೌಟ್) ಶ್ರೀಮತಿ ಶರಣಮ್ಮಾ ನಿಲೋಗಿ, ಜಿಲ್ಲಾ ಆಯುಕ್ತರು (ಗೈ), ಶ್ರೀಮಹಾಲಿಂಗಯ್ಯ ಹಿರೇಮಠ, ಜಿಲ್ಲಾ ಕಾರ್ಯದರ್ಶಿಗಳು, ಶ್ರೀಮತಿ ಅನ್ನಪೂರ್ಣ ಭಾಗವಹಿಸಿದ್ದರು. ಶ್ರೀ ವೆಂಕಯ್ಯ ಇನಾಮದಾರ್, ಕ್ಷೇತ್ರ ಶಿಕ್ಷಣ ಅಧಿಕಾರಿಗಳು, ಜೇವರ್ಗಿ ಇವರು ಅಧ್ಯಕ್ಷತೆ ವಹಿಸಿದ್ದರು.

## ಕೊಪ್ಪಳ ಜಿಲ್ಲೆ

### ಸ್ಕೌಟ್ಸ್ ಶತಮಾನೋತ್ಸವ ಆಚರಣೆ

ದಿನಾಂಕ 8-12-2007ರಂದು ಮುಂಜಾನೆ ಸ್ಥಳೀಯ ಸಂಸ್ಥೆಯ ಆವರಣದಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್‌ಗಳ ಪಥಸಂಚಲನಕ್ಕೆ ಮಾನ್ಯ ಮಲ್ಲನಗೌಡ ಗೌಡರು ಮುಖ್ಯೋಪಾಧ್ಯಾಯರು, ಶಾಸಕರ ಮಾದರಿ ಹಿರಿಯ ಪ್ರಾಥಮಿಕ ಶಾಲೆ, ಗಂಗಾವತಿ ಇವರು ಚಾಲನೆ ನೀಡಿದರು. ನಗರದ ಮಧ್ಯಭಾಗದಲ್ಲಿ ಇರುವ ಮಹಾತ್ಮ ಗಾಂಧಿ ಮೂರ್ತಿಗೆ ಕೊಪ್ಪಳ ಜಿಲ್ಲಾ ಆಯುಕ್ತರಾದ ಶ್ರೀ ಹೆಚ್.ಎಂ. ಸಿದ್ಧರಾಮ ಸ್ವಾಮಿಗಳು ಮಾಲಾರ್ಪಣೆ ಮಾಡಿದರು.

ಅಂದು ಸಂಜೆ 3-00 ಗಂಟೆಗೆ ಶಾಸಕರ ಮಾದರಿ ಹಿರಿಯ ಪ್ರಾಥಮಿಕ ಶಾಲೆಯ ಆವರಣದಲ್ಲಿ ಮುಕ್ತಾಯ ಸಮಾರಂಭವನ್ನು ಆಯೋಜಿಸಲಾಗಿತ್ತು. ಆ ಸಭೆಗೆ ಶ್ರೀ ಮಲ್ಲನಗೌಡ ಗೌಡರ್, ಶ್ರೀಮತಿ ಇಂದುಮತಿ, ಸ್ಥಳೀಯ ಸಂಸ್ಥೆಯ ಉಪಾಧ್ಯಾಕ್ಷರಾದ ಶ್ರೀ ಶಿವರಾಮನಗೌಡರು, ಜಿಲ್ಲಾ ಸಂಘಟನಾ ಆಯುಕ್ತರಾದ ಶ್ರೀ ಎ. ಯರ್ರಣ್ಣ ಹಾಗೂ ಜಿಲ್ಲಾ ತರಬೇತಿ ಆಯುಕ್ತರಾದ ಶ್ರೀ ಜಯರಾಜ ಬೂಸದ್, ಸ್ಥಳೀಯ ಸಂಸ್ಥೆಯ ಕಾರ್ಯದರ್ಶಿಗಳಾದ ಶ್ರೀ ಸಂಗಯ್ಯಸ್ವಾಮಿ ಹಾಗೂ ಇತರ ಪದಾಧಿಕಾರಿಗಳು ಉಪಸ್ಥಿತರಿದ್ದರು.

ಈ ಸಂದರ್ಭದಲ್ಲಿ ಗಂಗಾವತಿಯಲ್ಲಿ ಹೊಸದಾಗಿ ಶ್ರೀ ಚನ್ನಬಸವಸ್ವಾಮಿ ರೋವರ್ಸ್ ಕ್ರ್ಯೂ ಘಟಕವನ್ನು ಪ್ರಾರಂಭಿಸಲಾಯಿತು. ಈ ಸಭೆಯ ಅಧ್ಯಕ್ಷ ಸ್ಥಾನವನ್ನು ಜಿಲ್ಲಾ ಆಯುಕ್ತರಾದ ಶ್ರೀ ಹೆಚ್.ಎಂ. ಸಿದ್ದರಾಮ ಸ್ವಾಮಿ ವಹಿಸಿದ್ದರು.

## ರಾಯಚೂರು ಜಿಲ್ಲೆ

### ಪಲ್ಸ್ ಪೋಲಿಯೋ ಕಾರ್ಯಕ್ರಮದಲ್ಲಿ ಸ್ಕೌಟ್ಸ್ ಗೈಡ್ಸ್

ಇತ್ತೀಚೆಗೆ ಜರುಗಿದ ರಾಷ್ಟ್ರೀಯ ಪಲ್ಸ್ ಪೋಲಿಯೋ ಕಾರ್ಯಕ್ರಮದಲ್ಲಿ ರಾಯಚೂರು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್‌ನ ಜಿಲ್ಲಾ ಸಂಸ್ಥೆಯ ಪದಾಧಿಕಾರಿಗಳಾದ ಶ್ರೀಮತಿ ಅಜೀಜಾಸುಲ್ತಾನ. ಡಿ.ಸಿ.(ಜಿ), ಶ್ರೀ ಖಾಜಾಹುಸೇನ ಆನಾಹೊಸೂರ, ಡಿ.ಓ.ಸಿ(ಜಿ), ಕೆ ಮತ್ತು ಬಿ ಪ್ರೌಢಶಾಲೆಯ ಖುರ್ಷಿದ ಅಲಿ ಎಸ್.ಎಂ. ಬಸವ ವಿದ್ಯಾ ನಿಕೇತನ ಪ್ರೌಢ ಶಾಲೆಯ

ಸ್ಕೌಟ್ಸ್ - ಗೈಡ್ಸ್ ವಿದ್ಯಾ ಭಾರತಿ ಪ್ರೌಢ ಶಾಲೆಯ ಭಾರತಿ ಗೈಡ್ಸ್ ಕ್ಯಾಪ್ಟನ್ ಟಾಗೋರ ಸ್ಮಾರಕ ಪ್ರೌಢ ಶಾಲೆಯ ಶ್ರೀ ಎಸ್.ಎಂ. ಕಮಲಾಕರ ಭಾಗವಹಿಸಿದ್ದರು. ಜಿಲ್ಲಾ ಮಾನವ ಹಕ್ಕುಗಳ ಸಂಘದ ಪದಾಧಿಕಾರಿಗಳು ಆರೋಗ್ಯ ಇಲಾಖೆಯ ಕಾರ್ಯಕರ್ತರು ಭಾಗವಹಿಸಿದ್ದರು.

## ಬೆಳಗಾಂ ಜಿಲ್ಲೆ

ಸ್ಟೇಟ್ ಸಂಯುಕ್ತ ಪದವಿ ಪೂರ್ವ ಕಾಲೇಜು ಆವರಣ ರಾಮದುರ್ಗ ಇಲ್ಲಿ ದಿನಾಂಕ : 15-12-2007 ರಿಂದ 17-12-2007ರ ವರೆಗೆ ಜಿಲ್ಲಾ ಮಟ್ಟದ ಸ್ಕೌಟ್ಸ್ ಮತ್ತು ಗೈಡ್ಸ್ ಮೇಳವನ್ನು ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಾರ್ಯಾಲಯ ರಾಮದುರ್ಗ ಹಾಗೂ ತಾಲ್ಲೂಕು ಸಂಸ್ಥೆ ರಾಮದುರ್ಗ ಜಿಲ್ಲಾ ಸಂಸ್ಥೆ ಬೆಳಗಾವಿ ಇವರ ಸಂಯುಕ್ತ ಆಶ್ರಯದಲ್ಲಿ ನಡೆಸಲಾಯಿತು. ಶ್ರೀ ಜಿ.ಜಿ. ಪಾಟೀಲ, ಶಿಕ್ಷಣ ಮತ್ತು ಆರೋಗ್ಯ ಸ್ಥಾಯಿ ಸಮಿತಿ ಸದಸ್ಯರು, ಜಿಲ್ಲಾ ಪಂಚಾಯತ್ ಬೆಳಗಾವಿ ಇವರ ಮೇಳವನ್ನು ಉದ್ಘಾಟಿಸಿದರು.

ಪೂಜ್ಯ ಶ್ರೀ ಶ್ರೀ ಅಭಿನವ ಸಿದ್ದಲಿಂಗ ಶಿವಾಚಾರ್ಯ ಮಹಾಸ್ವಾಮಿಗಳು ಬೃಹನ್ಮಠ ಚಿಪ್ಪಲಕಟ್ಟಿ ಇವರ ಸಾನ್ನಿಧ್ಯದಲ್ಲಿ ಹಾಗೂ ಶ್ರೀಮತಿ ಶಾಂತವ್ವ ದು ಪೂಜಾರ ಅಧ್ಯಕ್ಷರು ತಾಲ್ಲೂಕು ಪಂಚಾಯತ್ ರಾಮದುರ್ಗ ಇವರ ಅಧ್ಯಕ್ಷತೆಯಲ್ಲಿ ಉದ್ಘಾಟನಾ ಸಮಾರಂಭ ನೆರವೇರಿತು. ಮುಖ್ಯ ಅತಿಥಿಗಳಾಗಿ ಶ್ರೀಮತಿ ರೂಪಾ ವಿ. ಯಲಿಗೋಡ, ಉಪಾಧ್ಯಕ್ಷರು ತಾಲ್ಲೂಕು ಪಂಚಾಯತ್ ರಾಮದುರ್ಗ ಶ್ರೀ ಎಸ್.ಸಿ. ಕರಿಕಟ್ಟಿ, ಕ್ಷೇತ್ರ ಶಿಕ್ಷಣಾಧಿಕಾರಿಗಳು, ರಾಮದುರ್ಗ ಇವರು ಆಗಮಿಸಿದ್ದರು ಶ್ರೀ ಆರ್.ವೈ. ಸಂಗಮೇಶ, ತಹಶೀಲ್ದಾರರು ಹಾಗೂ ಅಧ್ಯಕ್ಷರು ಭಾರತ್ ಸ್ಕೌಟ್ಸ್ - ಗೈಡ್ಸ್ ತಾಲ್ಲೂಕು ಸಂಸ್ಥೆ ರಾಮದುರ್ಗ. ಶ್ರೀ ವಿ.ಎನ್. ಗೋಡಖಿಂಡಿ, ಉಪಾಧ್ಯಕ್ಷರು ಭಾರತ್ ಸ್ಕೌಟ್ಸ್ - ಗೈಡ್ಸ್, ತಾಲ್ಲೂಕು ಸಂಸ್ಥೆ, ಶ್ರೀ ಕೆ.ಡಬ್ಲ್ಯೂ. ಪೆಟ್ಲೂರ್, ಬಿ.ಆರ್.ಸಿ. ಸಮನ್ವಯಾಧಿಕಾರಿಗಳು, ರಾಮದುರ್ಗ ಶ್ರೀ ಜೆ.ಎ. ಕಂಬಿ ಪ್ರಾಚಾರ್ಯರು. ಸ್ಟೇಟ ಸಂಯುಕ್ತ ಪದವಿ ಪೂರ್ವ ಕಾಲೇಜ್ ರಾಮದುರ್ಗ, ಶ್ರೀ ಎಚ್.ವೈ. ಕಟ್ಟಿಮನಿ, ಮುಖ್ಯಾಧ್ಯಾಪಕರು ನೂತನ ಹೆಣ್ಣು ಮಕ್ಕಳ ಪ್ರೌಢಶಾಲೆ ರಾಮದುರ್ಗ ಶ್ರೀ ಪಿ.ಎಸ್. ರಾಯಭಾಗ, ಶಿಕ್ಷಣ ಸಂಯೋಜಕರು, ಶ್ರೀ ಡಿ.ಎಂ. ಪತ್ತಾರ, ಸ್ಕೌಟ್ಸ್ ಶಿಕ್ಷಕರು ಇವರೆಲ್ಲರೂ ಉಪಸ್ಥಿತರಿದ್ದರು.

ಶ್ರೀ ಆರ್.ಸಿ. ರಾಠೋಡ, ಶಿಕ್ಷಣ ಸಂಯೋಜಕರು ರಾಮದುರ್ಗ ಇವರು ಕಾರ್ಯಕ್ರಮ ನಿರೂಪಿಸಿದರು. ಕಾರ್ಯಕ್ರಮದಲ್ಲಿ ಜಿಲ್ಲೆಯ ಸ್ಕೌಟ್ಸ್ ಮತ್ತು ಗೈಡ್ಸ್ ಹಾಗೂ ಸ್ಕೌಟರ್ಸ್ ಮತ್ತು ಗೈಡರ್ಸ್ ಮತ್ತು ಸಂಸ್ಥೆಯ ಪದಾಧಿಕಾರಿಗಳು ಸೇರಿ ಒಂದು ಸಾವಿರ ಜನರು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

## ಸೇರು ಬಾ ಸ್ಕೌಟಿಗೆ

ಸಿಹಿಮೊಗೆಯಿದು ಶಿವಪ್ಪ ನಾಯಕನ ತಾಣ
ಹೆಸರಾಗಿಹನು ಈತ ಶಿಸ್ತಿಗೆ ಕಾಣ
ಕಲಿಯುವುದು ಬಹಳವಿದೆ ಕೇಳು ನೀ ಜಾಣ
ಸೇವೆ ಮಾಡುತ ತೀರಿಸೋಣ ಈ ಮಣ್ಣಿನ ಋಣ

ಸೇವೆಗಾಗಿ ಸಿದ್ಧ ಎನಲು ಸೇರು ಈ ಸಂಸ್ಥೆಗೆ
ಶಿಸ್ತಿನ ಸಿಪಾಯಿಯಾಗಿ ಕೀರ್ತಿ ತಾ ಶಾಲೆಗೆ
ಕರ್ತವ್ಯಗಳಿವೆ ಮೂರು ಪ್ರತಿಯೊಂದು ಜೀವಿಗೆ
ತಿಳಿಯಲದನು ಇಂದೇ ಸೇರು ನೀ ಸ್ಕೌಟಿಗೆ.

ತಂದೆ-ತಾಯಿ-ಗುರುವನ್ನು ದೇವರೆಂದು ನೀ ತಿಳಿ,
ಪ್ರಾಣಿ-ಪಕ್ಷಿ-ಪ್ರಕೃತಿಯನು ಪ್ರೀತಿಸುವುದ ನೀ ಕಲಿ,
ಆಟ-ಪಾಠ ಕಲಿತು ಗೆಳೆಯರೊಡನೆ ನೀ ನಲಿ
ಜಾತಿ-ಮತ, ಬೇಧ-ಭಾವಗಳೆಲ್ಲ ನಮ್ಮಿಂದ ತೊಲಗಲಿ

– *ಬಿ ನಾಗರಾಜ್*, ಶಿಕ್ಷಕರು
ಜೆ.ಪಿ.ಎನ್. ಹೈಸ್ಕೂಲ್, ಶಿವಮೊಗ್ಗ

ಸಮಾರೋಪ ಸಮಾರಂಭದಲ್ಲಿ ಅಧ್ಯಕ್ಷತೆ ವಹಿಸಿದ್ದ ಶ್ರೀ ವಿ.ಎಸ್. ಗೋಡಖಿಂಡಿಯವರು ಕಾರ್ಯಕ್ರಮದ ಸಂಘಟನೆ ಕುರಿತು ಪ್ರಶಂಸೆ ವ್ಯಕ್ತಪಡಿಸಿದರು.

ಇಂದಿನ ಯುವ ಪೀಳಿಗೆಯನ್ನು ಈ ವಾಹಿನಿಯಲ್ಲಿ ಸೇರಿಸುವ ಅಗತ್ಯವಿದೆ ಎಂದು ವಿಭಾಗೀಯ ಸ್ಕೌಟ್ಸ್ ಉಪ ಆಯುಕ್ತರಾದ ಶ್ರೀ ಜಿ.ಎಂ. ಪಾಟೀಲ ಅವರು ತಿಳಿಸಿದರು.

ಕಾರ್ಯಕ್ರಮದ ದಿವ್ಯಸಾನಿಧ್ಯ ವಹಿಸಿದ ತಪೋಭೂಷಣ ಶ್ರೀ ಷ.ಬ್ರ. ವೀರಭದ್ರಶಿವಯೋಗಿ ಶಿವಾಚಾರ್ಯ ಮಹಾಸ್ವಾಮಿಗಳು ಸಂಸ್ಥಾನಮಠ ಕಟಕೋಳ ಮು. ಚಂದರಗಿ ಅವರು ಶ್ರೀ ವಚನ ನೀಡಿದರು.

ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ವಿ.ಜಿ. ಕುಲಕರ್ಣಿ ಹಾಗೂ ಜಿಲ್ಲಾ ಪಂಚಾಯತ್ ಸದಸ್ಯರಾದ ಶ್ರೀ ಎಂ.ಎಸ್. ದಾವಲಬಾಯಿ ಉಪಸ್ಥಿತರಿದ್ದರು.

ದಿನಾಂಕ : 23-12-2007 ಹಾಗೂ 24-12-2007 ರಂದು ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಭವನ ಟಿಳಕವಾಡಿ ಬೆಳಗಾಂ. ಇಲ್ಲಿ ಬೆಳಗಾಂ ಜಿಲ್ಲೆಯ ಸ್ಕೌಟ್ಸ್ ಮತ್ತು ಗೈಡ್ಸ್‌ಗಳಿಗೆ ರಾಜ್ಯ ಮಟ್ಟದ ರಾಜ್ಯ ಪುರಸ್ಕಾರ ಪರೀಕ್ಷಾ ಶಿಬಿರ ನಡೆಯಿತು.

ಶಿಬಿರದ ಸಮಾರೋಪ ಸಮಾರಂಭದ ಅಧ್ಯಕ್ಷತೆಯನ್ನು ಶ್ರೀ ವಿ.ಜಿ. ಕುಲಕರ್ಣಿ, ಜಿಲ್ಲಾ ಮುಖ್ಯ ಆಯುಕ್ತರು ಬೆಳಗಾವಿ ಇವರು ವಹಿಸಿದ್ದರು.

ಶ್ರೀ ಎಂ.ಎಂ. ಲೊಂಡೆ, ಜಿಲ್ಲಾ ಮುಖ್ಯ ಆಯುಕ್ತರು, ಧಾರವಾಡ ಜಿಲ್ಲೆ ಇವರು ಮುಖ್ಯ ಅತಿಥಿಗಳಾಗಿ ಆಗಮಿಸಿದ್ದರು.

ರಾಜ್ಯ ಸಂಸ್ಥೆಯಿಂದ ಪರೀಕ್ಷಾ ಶಿಬಿರದ ನಾಯಕರಾಗಿ ಶ್ರೀಮತಿ ಪ್ರಭಾ ಎಂ. ಲೊಂಡೆ ತರಬೇತುದಾರರು ಧಾರವಾಡ ಜಿಲ್ಲೆ, ಶ್ರೀ ಎಸ್.ಎಸ್. ಬೊಮ್ಮನಹಳ್ಳಿ, ಜಿಲ್ಲಾ ಸಂಘಟಕರು ಬಿಜಾಪುರ ಜಿಲ್ಲೆ ಇವರು ಬೆಳಗಾಂ ಜಿಲ್ಲೆಯ ಒಟ್ಟು 16 ಗೈಡ್ಸ್‌ಗಳಿಗೆ ಹಾಗೂ ಒಟ್ಟು 19 ಸ್ಕೌಟ್ಸ್‌ಗಳಿಗೆ ಪರೀಕ್ಷೆ ನಡೆಸಿದರು.

## ಉತ್ತರ ಕನ್ನಡ ಜಿಲ್ಲೆ

### ಹೊನ್ನಾವರದ ಪಾವಿನಕುರ್ವೆಯಲ್ಲಿ ಮಾರ್ಥೋಮಾ ಸ್ಕೌಟ್ಸ್ ಗೈಡ್ಸ್‌ಗಳಿಂದ ವಾರ್ಷಿಕ ಶಿಬಿರ

ದಿನಾಂಕ : 30-12-2007 ರಂದು ಹೊನ್ನಾವರದ ಪಾವಿನಕುರ್ವೆಯಲ್ಲಿ ಸ್ಕೌಟ್ಸ್ ಸಂಸ್ಥೆಯ ಶತಮಾನೋತ್ಸವದ ಅಂಗವಾಗಿ ಮಾರ್ಥೋಮಾ ಶಾಲೆಯ ಸ್ಕೌಟ್ಸ್ ಗೈಡ್ಸ್‌ಗಳು ವಾರ್ಷಿಕ ಶಿಬಿರವನ್ನು ಏರ್ಪಡಿಸಿದ್ದರು. ಸ್ಕೌಟ್ ಮಾಸ್ಟರ್ ಶ್ರೀ ಬಿ.ಡಿ. ಫರ್ನಾಂಡೀಸ್‌ರವರ ನೇತೃತ್ವದಲ್ಲಿ ಪ್ರಾಂಶುಪಾಲರಾದ ಫಾದರ್ ಥೋಯಸ್ ಮೆಥ್ಯೂರವರ ಆಶೀರ್ವಾದದ ಜೊತೆಗೆ 64 ಸ್ಕೌಟ್ಸ್ ಮತ್ತು ಗೈಡ್ಸ್‌ಗಳು ಪಾವಿನ ಕುರ್ವೆಗೆ ಪ್ರಯಾಣ ಬೆಳೆಸಿದರು. ಅಲ್ಲಿ ಧ್ವಜವಂದನೆಯ ಜೊತೆಗೆ ಶಿಬಿರದ ಉದ್ಘಾಟನೆ ನಡೆಯಿತು. ಅಥಿತಿಗಳಾಗಿ ಜಿಲ್ಲಾ ಕಾರ್ಯದರ್ಶಿಗಳಾದ ಶ್ರೀ ವಿ.ವಿ. ನಾಯ್ಕ ಆಗಮಿಸಿದ್ದರು. ಈ ಶಿಬಿರದಲ್ಲಿ ಸಮುದ್ರದಂಡೆಯ ವೀಕ್ಷಣೆಯ ಜೊತೆಗೆ ಜಲಚರ ಪ್ರಾಣಿಗಳ ಅಧ್ಯಯನ, ವಿವಿಧ ರೀತಿಯ ಚಿಪ್ಪುಗಳ ಸಂಗ್ರಹಣೆ, ಸಮೀಪದಲ್ಲಿರುವ ಐತಿಹಾಸಿಕ ಬಸವರಾಜ್ ದುರ್ಗದ ಬಗ್ಗೆ ಅಧ್ಯಯನ ಹಮ್ಮಿಕೊಳ್ಳಲಾಗಿತ್ತು. ಸ್ಕೌಟ್ಸ್ ಗೈಡ್ಸ್‌ಗಳು ಪಾವಿನಕುರ್ವೆಯಲ್ಲಿರುವ ಹಲವು ಮನೆಗಳನ್ನು ಸಂದರ್ಶಿಸಿ ಜನರ ಉಡುಗೆ - ತೊಡುಗೆ, ವಿದ್ಯಾಭ್ಯಾಸ, ಸಂಸ್ಕೃತಿ, ಉದ್ಯೋಗಗಳ ಬಗ್ಗೆ ಮನೆಯವರ ಮುಖ್ಯಸ್ಥರಿಂದ ವಿಷಯ ಸಂಗ್ರಹಣೆ ಪಡೆದುಕೊಂಡಿದ್ದು ವಿಶೇಷವಾಗಿತ್ತು. ಈ ಶಿಬಿರಕ್ಕೆ ಶಾಲೆಯ ಶಿಕ್ಷಕರಾದ ಶ್ರೀ ಮಾಥವ್ ನಾಯ್ಕ ಹಾಗೂ ಮಿಸ್ ಪ್ರೀತಾರಾವ್ ಇವರು ಉಪಸ್ಥಿತರಿದ್ದು ಸಹಕರಿಸಿದರು.

## ದಕ್ಷಿಣ ಕನ್ನಡ ಜಿಲ್ಲೆ

### ಯುವ ದಿನಾಚರಣೆ ಮತ್ತು ರೋವರ್ ರೇಂಜರ್ ಸಮಾಗಮ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ದಕ್ಷಿಣ ಕನ್ನಡ ಜಿಲ್ಲೆಯ ರೋವರ್ ರೇಂಜರ್‌ಗಳಿಗೆ ದಿನಾಂಕ 11-01-2008 ರಿಂದ 13-1-2008ರ ವರೆಗೆ ದಕ್ಷಿಣ ಕನ್ನಡ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ತರಬೇತಿ ಕೇಂದ್ರ ಪಿಲಿಕುಳ ಮಂಗಳೂರು ಇಲ್ಲಿ ಯುವದಿನಾಚರಣೆ ಮತ್ತು ರೋವರ್ ರೇಂಜರ್ ಸಮಾಗಮವನ್ನು ಹಮ್ಮಿಕೊಳ್ಳಲಾಯಿತು. ಕಾರ್ಯಕ್ರಮದ ನಾಯಕತ್ವವನ್ನು ರೋವರ್ ಲೀಡರ್ ಶ್ರೀ ಕೆ.ಎಸ್. ಪ್ರತಿಮ್ ಕುಮಾರ್ ವಹಿಸಿದ್ದರು. ಅತಿಥಿ ಸಂಪನ್ಮೂಲ ವ್ಯಕ್ತಿಗಳಾಗಿ ಶಿವಮೊಗ್ಗ ಜಿಲ್ಲೆಯ ರೋವರ್ ಲೀಡರ್ ಶ್ರೀ ಗಣಪತಿ, ನ್ಯಾಯವಾದಿ, ಕಾಸರಗೋಡು ಜಿಲ್ಲಾ ಸ್ಕೌಟ್ಸ್ ತರಬೇತಿ ಆಯುಕ್ತರಾದ ಶ್ರೀ ಗುರುಮೂರ್ತಿ, ಎ.ಎಲ್.ಟಿ.(ಸ್ಕೌಟ್) ಹಾಗೂ ಶ್ರೀ ಎಂ.ಜಿ. ಕಜೆ, ಎ.ಎಲ್.ಟಿ.(ಸ್ಕೌಟ್) ಆಗಮಿಸಿದ್ದರು. ಜಿಲ್ಲೆಯ ವಿವಿಧ ಕಾಲೇಜ್‌ಗಳಿಂದ ರೋವರ್ ರೇಂಜರ್ ಹಾಗೂ ಲೀಡರ್‌ಗಳು ಭಾಗವಹಿಸಿದರು.

### ದಕ್ಷಿಣ ಕನ್ನಡ ಜಿಲ್ಲಾ ವೃಕ್ಷಮಣಿಧಾರಕರ ಸಮಾವೇಶ

ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್ ಸಂಸ್ಥೆಯಲ್ಲಿ ಕರ್ತವ್ಯ ನಿರ್ವಹಿಸುವ ಶಿಕ್ಷಕ - ಶಿಕ್ಷಕಿಯರು ಪಡೆಯುವ ಅತ್ಯುನ್ನತ ಪುರಸ್ಕಾರವಾದ ವೃಕ್ಷಮಣಿಧಾರಣೆಯನ್ನು ದಿನಾಂಕ 12-01-2008ನೇ ಶನಿವಾರ ಯುವದಿನಾಚರಣೆಯ ದಿನದಂದು ದಕ್ಷಿಣ ಕನ್ನಡ ಜಿಲ್ಲಾ ಸ್ಕೌಟ್ಸ್ ಮತ್ತು ಗೈಡ್ಸ್ ಭವನ ಮಂಗಳೂರಿನಲ್ಲಿ ನಡೆದ ವೃಕ್ಷಮಣಿಧಾರಕರ ಸಮಾವೇಶದಲ್ಲಿ ಜಿಲ್ಲಾ ತರಬೇತಿ ಆಯುಕ್ತರುಗಳಾದ ಶ್ರೀ ಬಿ.ಎಂ. ತುಂಬೆ, ಎ.ಎಲ್.ಟಿ.(ಸ್ಕೌಟ್) ಶ್ರೀಮತಿ ಸುಫಲ, ಬಿ.ಎ.ಎಲ್.ಟಿ.(ಗೈಡ್) ಪ್ರತಿಜ್ಞೆ ಭೋಧಿಸಿ ಜಿಲ್ಲೆಯ ಸ್ಕೌಟರ್ ಗೈಡರ್‌ಗಳಿಗೆ ನೀಡಲಾಯಿತು.

ಹಿರಿಯ ಸ್ಕೌಟರ್ ಶ್ರೀ ಗೋಪಾಲ ಕೃಷ್ಣ ಭಟ್, ಎಲ್.ಟಿ(ಸ್ಕೌಟ್) ವೃಕ್ಷಮಣಿಧಾರಕರ ಸಮಾವೇಶದ ಬಗ್ಗೆ ಮಾಹಿತಿ ನೀಡಿದರು, ಮುಖ್ಯ ಅತಿಥಿಯಾಗಿ ಶ್ರೀಮತಿ ಫಿಲೋಮಿನಾ ಲೋಬೋ, ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ (ಅಭಿವೃದ್ಧಿ) ಉಪಸ್ಥಿತರಿದ್ದರು, ಜಿಲ್ಲಾ ಮುಖ್ಯ ಆಯುಕ್ತರಾದ ಶ್ರೀ ಐ.ಎ. ಕೈರನ್ನ, ಅಧ್ಯಕ್ಷತೆ ವಹಿಸಿದ್ದರು.

ಡಿಸೆಂಬರ್ 1 ಮತ್ತು 2 ರಂದು ಮಂಗಳೂರು ತಾಲ್ಲೂಕಿನ 5 ಸ್ಥಳೀಯ ಸಂಸ್ಥೆಗಳ, ಸ್ಕೌಟ್ ಮತ್ತು ಗೈಡ್‌ಗಳ ತೃತೀಯ ಸೋಪಾನ ಪರೀಕ್ಷಾ ಶಿಬಿರವು ಶ್ರೀ ಎಂ.ಜಿ. ಕಜೆ, ಎ.ಎಲ್.ಟಿ.(ಸ್ಕೌಟ್) ಹಾಗೂ ಶ್ರೀಮತಿ ಬಿ. ಸುಫಲ, ಎ.ಎಲ್.ಟಿ.(ಗೈಡ್) ಇವರ ನಾಯಕತ್ವದಲ್ಲಿ ಪಿಲಿಕುಳವಲ್ಲಿ ಜರುಗಿತು.

ದಿನಾಂಕ ಡಿಸೆಂಬರ್ 1 ಮತ್ತು 2 ರಂದು ಮಂಗಳೂರು ತಾಲ್ಲೂಕಿನ 5 ಸ್ಥಳೀಯ ಸಂಸ್ಥೆಗಳ ಕಬ್ ಮತ್ತು ಬುಲ್‌ಬುಲ್ಸ್ ಮಕ್ಕಳ ತೃತೀಯ ಚರಣ ಹಾಗೂ ಹೀರಕ್ ಪಂಕ್ ಪರೀಕ್ಷ ಶಿಬಿರವು ಶ್ರೀಮತಿ ಗೀತಾ ಶೆಟ್ಟಿ, ಹೆಚ್.ಡಬ್ಲ್ಯೂ.ಬಿ.(ಕಬ್) ಹಾಗೂ ಶ್ರೀಮತಿ ವೀರಾ ಪೇರ್ನಾಂಡಿಸ್ ಇವರ ನಾಯಕತ್ವದಲ್ಲಿ ಎನ್.ಎಂ.ಪಿ.ಟಿ. ಆಂಗ್ಲ ಮಾಧ್ಯಮ ಶಾಲೆ ಪಣಂಬೂರು ಇಲ್ಲಿ ನಡೆಯಿತು.

ದಿನಾಂಕ ಡಿಸೆಂಬರ್ 8 ಮತ್ತು 9 ದಕ್ಷಿಣ ಕನ್ನಡ ಜಿಲ್ಲಾ ಕಬ್ಸ್ ವಿಭಾಗದ ಚತುರ್ಥ ಚರಣ ಪರೀಕ್ಷಾ ಶಿಬಿರವು ಜಿಲ್ಲಾ ಸ್ಕೌಟ್ಸ್ ಗೈಡ್ಸ್ ಭವನ ಲಾಲ್‌ಬಾಗ್ ಮಂಗಳೂರು ಇಲ್ಲಿ ಶ್ರೀ ರಾಮರಾವ್, ಎ.ಎಲ್.ಟಿ.(ಕಬ್)ರವರ ನಾಯಕತ್ವದಲ್ಲಿ ನಡೆಯಿತು.

ದಿನಾಂಕ ಡಿಸೆಂಬರ್ 8 ಮತ್ತು 9 ರಂದು ಮೂಡಬಿದ್ರೆ ತಾಲ್ಲೂಕಿನ ಸ್ಥಳೀಯ ಸಂಸ್ಥೆಗಳ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳ ತೃತೀಯ ಸೋಪಾನ ಪರೀಕ್ಷ ಶಿಬಿರವು ಶ್ರೀ ಎಂ. ಬಾಬು, ಹೆಚ್.ಡಬ್ಲ್ಯೂ.ಬಿ.(ಸ್ಕೌಟ್) ಹಾಗೂ

ಶ್ರೀಮತಿ ಅನಿತಾ ಪಿಂಟೊ, ಎ.ಎಲ್.ಟಿ.(ಗೈಡ್) ಇವರ ನಾಯಕತ್ವದಲ್ಲಿ ಸರ್ವೋದಯ ಪ್ರೌಢ ಶಾಲೆ ಕಲ್ಲಮೂಡ್ಕೂರು, ಮೂಡಬಿದ್ರೆ ಇಲ್ಲಿ ನಡೆಯಿತು.

ದಿನಾಂಕ ಡಿಸೆಂಬರ್ 15 ಮತ್ತು 16 ರಂದು ಬೆಳ್ತಂಗಡಿ ತಾಲ್ಲೂಕಿನ ಮೊಡಾಂತ್ಯಾರ್ ಸ್ಥಳೀಯ ಸಂಸ್ಥೆಯಲ್ಲಿ ಸ್ಕೌಟ್ಸ್ ಮತ್ತು ಗೈಡ್ಸ್ ಮಕ್ಕಳ ತೃತೀಯ ಸೋಪಾನ ಪರೀಕ್ಷಾ ಶಿಬಿರವು ಶ್ರೀ ಶಾಂತಾರಾಂ ಪ್ರಭು, ಹೆಚ್.ಡಬ್ಲ್ಯೂ.ಬಿ.(ಸ್ಕೌಟ್) ಹಾಗೂ ಪ್ರಫುಲ್ಲ, ಹೆಚ್.ಡಬ್ಲ್ಯೂ.ಬಿ.(ಗೈಡ್) ಇವರ ನಾಯಕತ್ವದಲ್ಲಿ ಗಾರ್ಡಿಯನ್ ಏಂಜಲ್ಸ್ ಪ್ರಾಥಮಿಕ ಶಾಲೆ ಮೊಡಾಂತ್ಯಾರ್ ಬೆಳ್ತಂಗಡಿ ತಾಲ್ಲೂಕು ಇಲ್ಲಿ ನಡೆಯಿತು.

ದಿನಾಂಕ ಡಿಸೆಂಬರ್ 15 ಮತ್ತು 16 ರಂದು ಬೆಳ್ತಂಗಡಿ ತಾಲ್ಲೂಕಿನ ಮೊಡಾಂತ್ಯಾರ್ ಸ್ಥಳೀಯ ಸಂಸ್ಥೆಯಲ್ಲಿ ಕಬ್ ಮತ್ತು ಬುಲ್‌ಬುಲ್ಸ್ ಮಕ್ಕಳ ತೃತೀಯ ಚರಣ ಹಾಗೂ ಹೀರಕ್ ಪಂಕ್ ಪರೀಕ್ಷಾ ಶಿಬಿರವು ಶ್ರೀಮತಿ ರವಿಕಲಾ, ಹೆಚ್.ಡಬ್ಲ್ಯೂ.ಬಿ.(ಕಬ್) ಹಾಗೂ ವೀರಾ ಪೇರ್ನಾಡಿಸ್ ಇವರ ನಾಯಕತ್ವದಲ್ಲಿ ನಡೆಯಿತು.

ದಿನಾಂಕ ಡಿಸೆಂಬರ್ 15 ಮತ್ತು 16 ರಂದು ದಕ್ಷಿಣಕನ್ನಡ ಜಿಲ್ಲಾ ಬುಲ್‌ಬುಲ್ ವಿಭಾಗದ ಹೀರಕ್ ಪಂಕ್ ಪರೀಕ್ಷಾ ಶಿಬಿರವು ಜಿಲ್ಲಾ ಸ್ಕೌಟ್ಸ್ ಗೈಡ್ಸ್ ಭವನ ಲಾಲ್‌ಬಾಗ್ ಮಂಗಳೂರು ಇಲ್ಲಿ ಸಿಸ್ಟರ್ ಲೋರಿನ, ಎ.ಎಲ್.ಟಿ.(ಪ್ಲಾಕ್)ರವರ ನಾಯಕತ್ವದಲ್ಲಿ ನಡೆಯಿತು.

## ತುಮಕೂರು ಜಿಲ್ಲೆ

ದಿನಾಂಕ 20-01-2008ರಂದು ಶ್ರೀ ಗುರುಲೀಲಾ ಕಲ್ಯಾಣ ಮಂಟಪ, ಬಿ.ಹೆಚ್. ರಸ್ತೆ, ತಿಪಟೂರಿನಲ್ಲಿ ಸ್ಕೌಟ್ ಶತಮಾನೋತ್ಸವದ ಅಂಗವಾಗಿ ವಿಶೇಷ ಸ್ಕೌಟ್ಸ್, ಗೈಡ್ಸ್, ಕಬ್ಸ್ ಮತ್ತು ಬುಲ್‌ಬುಲ್ಸ್ ರ್‍ಯಾಲಿ ನಡೆಯಿತು. ಸ್ಥಳೀಯ ಸಂಸ್ಥೆ ಅಧ್ಯಕ್ಷರಾದ ಶ್ರೀ ಜಿ. ನಂದಕುಮಾರ್‌ರವರು ಅಧ್ಯಕ್ಷತೆ ವಹಿಸಿದ್ದು ಶ್ರೀ ಬಿ.ಎ. ರಾಜಶೇಖರ್ ಉಪನಿರ್ದೇಶಕರು ಸಾರ್ವಜನಿಕ ಶಿಕ್ಷಣ ಇಲಾಖೆ ತುಮಕೂರು ಇವರು ಮೇಳವನ್ನು ಉದ್ಘಾಟಿಸಿದರು.

ಶ್ರೀ ಸದಾಶಿವರಾವ್ ಛೇರ್‌ಮನ್, ಶ್ರೀ ನಾರಾಯಣ ಶೆಟ್ಟಿ, ರಾಜ್ಯ ಸಂಘಟನಾ ಆಯುಕ್ತರು (ಸ್ಕೌಟ್), ಶ್ರೀ ಬಿ.ಆರ್. ವೇಣುಗೋಪಾಲ ಕೃಷ್ಣ, ಜಿಲ್ಲಾ ಆಯುಕ್ತರು (ಸ್ಕೌಟ್), ಶ್ರೀ ಹೆಚ್.ಬಿ. ಕೃಷ್ಣಪ್ಪ, ಮುಖ್ಯೋಪಾಧ್ಯಾಯರು ಉಪಸ್ಥಿತರಿದ್ದು ಮಾತನಾಡಿದರು.

ಊರಿನ ಪ್ರಮುಖ ಬೀದಿಗಳಲ್ಲಿ ಪಥಚಲನೆ, ಚಿತ್ರ ರಚನಾ ಸ್ಪರ್ಧೆ, ಸಾಹಸ ಚಟುವಟಿಕೆಗಳು ಸಾಂಸ್ಕೃತಿಕ ಕಾರ್ಯಕ್ರಮಗಳನ್ನು ಹಮ್ಮಿಕೊಳ್ಳಲಾಗಿತ್ತು.

ಸಂಜೆ 4-30ಕ್ಕೆ ಮೇಳದ ಸಮಾರೋಪ ಸಮಾರಂಭ ಶ್ರೀ ಸದಾಶಿವರಾವ್, ಅಧ್ಯಕ್ಷರು ಯೂತ್ ಹಾಸ್ಟೆಲ್ ಅಸೋಶಿಯೇಷನ್ ಆಫ್ ಇಂಡಿಯಾ ಇವರ ಅಧ್ಯಕ್ಷತೆಯಲ್ಲಿ ನಡೆಯಿತು. ಶ್ರೀ ನಂದಕುಮಾರ್, ಶ್ರೀ ವಿ.ಎಂ. ರಾಮಚಂದ್ರ, ಶ್ರೀ ಕುಮಾರಾರಾಧ್ಯರು, ಶ್ರೀ ನರಸೇಗೌಡರು, ಶ್ರೀ ನಂಜುಂಡಪ್ಪ, ಶ್ರೀ ಲಕ್ಷ್ಮೀ ನಾರಾಯಣ್, ಶ್ರೀಮತಿ ಸರಸ್ವತಿ ಭೂಷಣ್, ಶ್ರೀ ಯೋಗಾನಂದ ಮುಂತಾದವರು ಮುಖ್ಯ ಅತಿಥಿಗಳಾಗಿದ್ದರು.

ಶತಮಾನೋತ್ಸವದ ಅಂಗವಾಗಿ ಸಂಸ್ಥೆಯಲ್ಲಿ ಸತತವಾಗಿ ಸೇವೆ ಸಲ್ಲಿಸಿದ ಗಣ್ಯರಿಗೆ ಸ್ಥಳೀಯ ಸಂಸ್ಥೆಯವರು ಸನ್ಮಾನಿಸಿದರು. ಮೇಳದಲ್ಲಿ ತಾಲ್ಲೋಕಿನ 260ಕ್ಕೂ ಹೆಚ್ಚು ಸ್ಕೌಟ್ಸ್ ಗೈಡ್ಸ್ ಕಬ್ಸ್ ಮತ್ತು ಬುಲ್‌ಬುಲ್ಸ್‌ಗಳು ಭಾಗವಹಿಸಿದ್ದರು.

## ಶಿವಮೊಗ್ಗ ಜಿಲ್ಲೆ

**ಜೆ.ಪಿ.ಎನ್. ಶಾಲೆಯಲ್ಲಿ ವಿಶ್ವ ಸ್ಕೌಟ್ ಶತಮಾನೋತ್ಸವ ವರ್ಷಾಚರಣೆ**

ದಿನಾಂಕ : 27-12-2008ರಂದು ಶ್ರೀ ಜಯಪ್ರಕಾಶ್ ನಾರಾಯಣ್ ಪದವಿ ಪೂರ್ವ

ಕಾಲೇಜು, ಸಭಾಂಗಣದಲ್ಲಿ ವಿಶ್ವ ಸ್ಕೌಟ್ ಶತಮಾನೋತ್ಸವ ವರ್ಷದ ಆಚರಣೆಯನ್ನು ಸಂಭ್ರಮದಿಂದ ಆಚರಿಸಲಾಯಿತು. ಈ ಸಂದರ್ಭದಲ್ಲಿ ನಗರದ ಕೈಗಾರಿಕೋದ್ಯಮಿ, ಹಿರಿಯರಾದ ಶ್ರೀ ಟಿ.ವಿ. ನಾರಾಯಣಶಾಸ್ತ್ರಿಯವರು ಉಪಸ್ಥಿತರಿದ್ದರು. 20 ಸ್ಕೌಟ್ ವಿದ್ಯಾರ್ಥಿಗಳಿಗೆ ಸಮವಸ್ತ್ರ ವಿತರಿಸಿದರು.

ಮುಖ್ಯ ಅತಿಥಿಗಳಾಗಿ ಬಂದಿದ್ದ ಶ್ರೀ ಕೆ.ಪಿ. ಬಿಂದುಕುಮಾರ್, ಶ್ರೀ ಎಂ.ಜಿ. ಶಿವಕುಮಾರ್, ಶ್ರೀ ಮಂಜುನಾಥಚಾರ್, ಶ್ರೀ ವೀರೇಶಪ್ಪ ರಾಷ್ಟ್ರೀಯ ಶಿಕ್ಷಣ ಸಮಿತಿಯ ಖಜಾಂಚಿ ಶ್ರೀ ಡಿ.ಹೆಚ್. ಶ್ರೀನಿವಾಸಮೂರ್ತಿ ಮಾತನಾಡಿದರು. ಪ್ರೊ॥ ಎ.ಎಸ್. ಚಂದ್ರಶೇಖರ್‌ರವರು ಸ್ಕೌಟ್ ಚಳುವಳಿಯ ಇತಿಹಾಸವನ್ನು ಮಕ್ಕಳಿಗೆ ಬಿಡಿಸಿ ತಿಳಿಸಿದರು.

ಸ್ಕೌಟ್ ಶಿಕ್ಷಕರಾದ ಶ್ರೀ ಬಿ. ನಾಗರಾಜ್‌ರವರು ಪ್ರಾಸ್ತಾವಿಕ ನುಡಿ ಮತ್ತು ಪರಿಚಯ ಮಾಡಿಕೊಡುತ್ತಾ "ಕೈಗಾರಿಕ ಪಿತಾಮಹಾ" ವಯೋವೃದ್ಧ ಸನ್ಮಾನ್ "ಸಿಲ್ವರ್ ಎಲಿಫೆಂಟ್" ಇತ್ಯಾದಿ ಪ್ರಶಸ್ತಿ ಪುರಸ್ಕೃತ ಶ್ರೀಯುತ ಶಾಸ್ತ್ರಿಯವರ ಸೇವಾ ಭಾವನೆಯನ್ನು ಕೊಂಡಾಡಿದರು.

ಸಾಮೂಹಿಕ ಪ್ರಾರ್ಥನೆಯೊಂದಿಗೆ ಪ್ರಾರಂಭವಾದ ಕಾರ್ಯಕ್ರಮದಲ್ಲಿ ಪ್ರಾಚಾರ್ಯರಾದ ಶ್ರೀ ಬಿ. ರಂಗಪ್ಪರವರು ಹಾಗೂ ಮುಖ್ಯೋಪಾಧ್ಯಾಯರಾದ ಶ್ರೀ ಎಂ.ಜಿ.ಕೆ. ರಂಗಪ್ಪರವರು ಉಪಸ್ಥಿತರಿದ್ದರು.

## Bangalore North District

*The Shivajinagar Local Association Organised Centenary Year of Annual Rally on 12th January- 2008 at St. Anthony Boys School and celebrated Youth Day, Swami Vivekananda Birth Day. Scouts and Guides went for Route March in the area with placard and this was flagged off by Rev. Mr. John Solomen, Parish Priest of francis X'ver Church.*

*350 Cubs, Bulbuls, Scouts & Guides and other members participated.*

*Valedictory function was witnessed by Mr. Prema Kumar, Sr. Leoleda ALT(B) of St. Joseph's Convent Chairman, President and office bearers and parents were present.*



*Shivajinagar Local Association also Organised Centenary Year of Scouting Get Together Programme for Scouts, Guides, State official, District officials, Local officials, Heads of the Institution and well wishers on 19th December 2007 at Stracy Memorial School. 100 members were present. Hon'ble Member of Rajya Sabha Mrs. Prema Kariappa was the Chief Guest of the ocession. Mrs. Geetha Nataraj, Joint State Secretary, Mrs. Janaki Venu Gopal, Mrs. Nirmala Kalasetty, graced the occasion. District Secretary Mr. Sheshadri, Mr. Shankar ASOC (S) were also present on this ocession.*

*The President Mr. Nicodues, the Chairman Sri. T.S. Lucas, Mr. D. Krubanandan Principal of Stracey Memorial School, Mr. D. Venkatesh, Vice President were also present.*



*Sri Chamundi Scout Group Celebrated its 89th anniversary on the 29th and 30th of December 2007 in their Group premises. State Chief Commissioner, Sri. Kondajji B. Shanmukhappa graced the occasion on the 29th of December and appreciated the Group's constinued services for over 89 years and also said that it is the Oldest Open unit in the Country. Mr. K.V. Krishna Murthy, Vice President of the Group Trust Presided over. State Chief Commissioner unveiled the Impact of Scouting and Guiding which was very much needed for the Public to highlight the essentials of the Movement.*

*On the 30th of December Col. Haridev Khatkar Rao, was the chief Guest while Smt. Geetha Nataraj and Smt. Ramalatha were the Guests of honour. Smt. Geetha Natraj released the Group's Calendar for 2008 with her blessings and appreciations. Smt. Ramnalatha unveiled the Movement Logo on the wall of the new building.*

*Sri Giriraj, Vice President of the Group Trust presided over the function. Two days programme included recognizing and honouring the public who are doing their sincere services for*



***The objectives of the 100th Anniversary Celebrations are :***

- *To Celebrate 100 Years of Scouting*
- *To Demonstrate the Unity of World Scouting*
- *To Improve & Promote the Quality of Scouting*
- *To Promote World Peace Through Brotherhood & Firendship*
- *To Demonstrate the Unique Method of Scouting*
- *To Provide Enjoyable & Beneficial Experiences*
- *To Demonstrate a Commitment to Nature & the Environment*
- *To Show Concern for all Communities*

***The Centenary Celebrations is an Occasion to Communicate our Goals of Character Building, Worldwide Peace and Integration***

*the society like Police Department, Postal department, Educational department, former members of the Trinity Groups.*

*Children gave educative and Cultural programmes on both the days.*

## HEARTY CONGRATULATIONS

*To the Bharat Scouts and Guides, Bangalore South District Association for launching their web site* ***www.Scout.org.in*** *on the occasion of their District Association Day held on Sunday the 28.01.2008 at State Headquarters, Fort, Bangalore-2. Please go through the web site for more information about Scouting and Guiding.*

*The Bharat Scouts and Guides, Karnataka conveys its Hearty Congratulations to Mr. A.S. Madhusudan, Asst. Secretary and his team who are responsible for the above web site.*

## ಗಮನಿಸಿ

**ಸ್ಕೌಟ್ಸ್, ಗೈಡ್ಸ್ ಮತ್ತು ದಳ ನಾಯಕರುಗಳೇ**

**ಫೆಬ್ರವರಿ 10, 2008 ಪೋಲಿಯೊ ಲಸಿಕೆ ಹಾಕುವ ಕಾರ್ಯಕ್ರಮದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಿರಿ!!**

**ಸಾರ್ವಜನಿಕರಿಗೆ ಸಹಕರಿಸಿರಿ!!!**

**5 ವರ್ಷದೊಳಗಿನ ಮಗುವಿಗೆ ಪೋಲಿಯೊ ಹನಿಯನ್ನು ತಪ್ಪದೇ ಕೊಡಿಸಿ**



**ಜೀವನಕ್ಕಾಗಿ ಎರಡು ಹನಿಗಳು**



**ಪ್ರತಿಯೊಂದು ಮಗುವಿಗೂ ಪೋಲಿಯೊ ಹನಿ ಹಾಕೋಣ**

**ರಾಷ್ಟ್ರವನ್ನು ಪೋಲಿಯೊದಿಂದ ಮುಕ್ತಗೊಳಿಸೋಣ**

ಪ್ರಕಟಣೆ :

**ಭಾರತ್ ಸ್ಕೌಟ್ಸ್ ಮತ್ತು ಗೈಡ್ಸ್, ಕರ್ನಾಟಕ**

ರಾಜ್ಯ ಕೇಂದ್ರ ಕಾರ್ಯಾಲಯ, ಪ್ರೊ. ಶಿವಶಂಕರ್ ವೃತ್ತ, ಕೊಂಡಜ್ಜಿ ಬಸಪ್ಪ ರಸ್ತೆ
ಕೋಟೆ, ಬೆಂಗಳೂರು-560 002. ದೂರವಾಣಿ : 2670 1227 / 26708803 / 2670 3133

# GONE HOME



*We record with deep regret the sad demise of* ***Sri T.R.P. Naidu****, Former Rover Leader of HAL Rover Crew, Bangalore and Former Headquarters Commissioner for Rover, Bharat Scouts and Guides, Karnataka who passed away on 13th January 2007 after brief illness at Bangalore.*

*He served the Bharat Scouts and Guides Movement for more than Four Decades and participated in number of State and National Level Jamborees as Chief Security Officer. He has been awarded the Highest award of Silver Star by the then President of India H.E. Dr. Shankar Dayal Sharma for the meritorious services rendered by him to the Movement for than four Decades. He was aged about 75 years.*

*He leaves behind him his Wife, a Son & four Daughters and many grand children.*

*We Pray God Almighty to give necessary Courage and Strength to his wife and other members of his family to bear this Irreparable Loss.*

*We, the Members of the Bharat Scouts and Guides, Karnataka join them in Praying for the Departed Soul.*

***MAY HIS SOUL REST IN PEACE***



# GONE HOME

*We record with deep regret the Sudden passing away of* ***Smt. N.H. Kamalakshamma****, Former State Org. Commissioner (G), Bharat Scouts and Guides, Karnataka, Bangalore who passed away on 14th January 2008 at her residence Bangalore. She was 68 years old.*

*She served the Movement as a ASOC (G), State Training Commissioner, State Org. Commissioner and Headquarters Commissioner (Bulbuls) for more than three decades in the Movement.*

*We Pray God Almighty to give necessary Courage and Strength to her Family members to bear this Irreparable Loss.*

*We, the members of Bharat Scouts and Guides, Karnataka, Join them in Praying for the Departed Soul.*

***MAY HER SOUL REST IN PEACE***



ದಿ 12-1-2008ರಂದು ಜವಾಹರ್ ಬಾಲಭವನದಲ್ಲಿ ಜರುಗಿದ "ಯುವ ದಿನಾಚರಣೆ"ಯಲ್ಲಿ ಭಾಗವಹಿಸಿದ ಸ್ಕೌಟ್ಸ್ - ಗೈಡ್ಸ್‌ಗಳು.



ಹಿಂದಿನ ಸ್ಥಾನಿಕ ಆಯುಕ್ತೆ ಶ್ರೀಮತಿ ಕೆ. ಮನೋಹರ ಅವರನ್ನು ದಿನಾಂಕ 12-01-2008ರಂದು ಬಾಲ ಭವನದಲ್ಲಿ ಅಭಿನಂದಿಸಲಾಯಿತು. ಶ್ರೀಮತಿ ನಿರ್ಮಲಾ ಕಲಾಶೆಟ್ಟಿ ಮತ್ತು ಸ್ಕೌಟ್-ಗೈಡ್‌ಗಳು ಚಿತ್ರದಲ್ಲಿದ್ದಾರೆ.



ಸ್ವಾಮಿ ವಿವೇಕಾನಂದರ ಬಗ್ಗೆ ಅತ್ಯುತ್ತಮ ವಿವರಗಳೊಂದಿಗೆ ಭಾಷಣ ಸ್ಪರ್ಧೆಯಲ್ಲಿ ಭಾಗವಹಿಸಿ ಬಹುಮಾನ ಪಡೆದ ವಿದ್ಯಾರ್ಥಿ ಜಿ.ಸಂತೋಷ್‌ಮಾತನಾಡುತ್ತಿರುವುದು. ಯುವಜನ ಸೇವಾ ಮತ್ತು ಕ್ರೀಡಾ ಇಲಾಖೆಯ ಆಯುಕ್ತ ಶ್ರೀ ಅಮರ್‌ಕುಮಾರ್ ಪಾಂಡೆ ಹಾಗೂ ಜಂಟಿ ನಿರ್ದೇಶಕರಾದ ಶ್ರೀ ಆರ್.ಎಲ್. ಪಾಟೀಲ್, ರಾಜ್ಯ ಮುಖ್ಯ ಆಯುಕ್ತರು ಹಾಗೂ ಇತರ ಪದಾಧಿಕಾರಿಗಳು ಚಿತ್ರದಲ್ಲಿದ್ದಾರೆ.



ದಿ 19-12-2007ರಂದು ಹಾಸನ ಜಿಲ್ಲೆಯ ಸ್ಕೌಟ್ಸ್ ಆಯುಕ್ತರಾದ ಡಾ॥ ವೈ.ಎಸ್. ವೀರಭದ್ರಪ್ಪ ಅವರನ್ನು ಸುತ್ತೂರು ಜಗದ್ಗುರು ಶ್ರೀಶ್ರೀ ಶಿವರಾತ್ರಿ ದೇಶೀಕೇಂದ್ರ ಸ್ವಾಮೀಜಿಯವರು ಶಾಲು ಹೊದಿಸಿ ಗೌರವಿಸಿದರು.



ಹಾಸನ ಜಿಲ್ಲಾ ಸಂಸ್ಥೆ ಏರ್ಪಡಿಸಿದ ಕಬ್ಸ್ - ಬುಲ್‌ಬುಲ್, ಸ್ಕೌಟ್ಸ್ - ಗೈಡ್ಸ್ ರ್‍ಯಾಲಿಯನ್ನು ದಿನಾಂಕ 18-12-2007ರಂದು ಹಾಸನ ನಗರಸಭೆ ಆಯುಕ್ತರಾದ ಶ್ರೀ ಎಚ್.ಎನ್. ಗೋಪಾಲಕೃಷ್ಣರವರು ಉದ್ಘಾಟಿಸುತ್ತಿರುವುದು. ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು ಹಾಗೂ ಇತರ ಅತಿಥಿಗಳು ಚಿತ್ರದಲ್ಲಿದ್ದಾರೆ.



ಹಾಸನ ಜಿಲ್ಲೆಯ ಸ್ಕೌಟ್ಸ್ - ಗೈಡ್ಸ್ ರ್‍ಯಾಲಿ ಹಾಗೂ ಸಮುದಾಯ ಭವನದ ಉದ್ಘಾಟನೆ ಸಂದರ್ಭದಲ್ಲಿ ದಿನಾಂಕ 19-12-2007ರಂದು ಏರ್ಪಡಿಸಿದ "ಸರ್ವಧರ್ಮ ಪ್ರಾರ್ಥನೆ"ಯಲ್ಲಿ ಭಾಗವಹಿಸಿದ ಗೌರವಾನ್ವಿತ ಅತಿಥಿಗಳು ರಾಜ್ಯ ಮತ್ತು ಜಿಲ್ಲಾ ಸಂಸ್ಥೆ ಪದಾಧಿಕಾರಿಗಳು, ಹಾಗೂ ಗೈಡ್‌ರ್‌ಗಳು.

100 A Hundred years of Promise 2007
Scouting Celebrates Centenary In 2007



**Arise! Awake and Stop Not till the Goal is Reached!**

**Conquer Yourself and the Whole Universe is Yours.**

**Give Every Thing, and Look for No Return.**

**- SWAMI VIVEKANANDA**

YOUR SUPPORT WILL HELP US TO REACH OUR GOAL





SCOUTS & GUIDES PARTICIPATING IN ESSAY WRITING COMPETITION HELD ON 12-01-2008 AT BALA BHAVAN, BANGALORE.


Regd as News Paper (Magazine) No : **CPMG/KA/BGW-549/2006-08**
Permitted to Post under WPP System
Vide No.: WPP-87 of SSP, BANGALORE WEST
Posted at: Bangalore City H.P.O. on 30-1-2008

ಸ್ಕೌಟ್ ಶತಮಾನೋತ್ಸವ - 2007
ಕರ್ನಾಟಕ ಸ್ಕೌಟ್ ಮತ್ತು ಗೈಡ್ ವಾರ್ತಾ ಪತ್ರಿಕೆ
Karnataka Scout & Guide
News Magazine



**If not delivered please return to :**

EDITOR, Karnataka Scout & Guide
State Headquarters, Prof. P. Sivashankar Circle
Kondajji Basappa Road, Fort
Bangalore - 560 002. Ph:26701227


160. SMT. NIRMALA KALSHETTY, LT(G),
Bharat Scouts and Guides,
# 39, Shanthigruha, Palace Road,
Bangalore-560001.


**PUBLISHED FOR** : The Bharat Scouts & Guides, Karnataka, State Headquarters, Fort, Bangalore - 560 002
by the State Secretary and Printed at : Sathyasri Printers (Pvt) Ltd., 5th Main, Chamarajpet, Bangalore - 560 018.